# ಕೊರವಂಜಿ

Koravanji

ಸೆಪ್ಟೆಂಬರ್ ೧೯೪೯



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು:

ಶ್ರೀ|| ರಂಗು
ಶ್ರೀ|| ಡಿ. ವೆಂಕಟೇಶಮೂರ್ತಿ
ಶ್ರೀ|| ಸೋಮೂ
ಶ್ರೀ|| ಹಾ. ರಾ.
ಶ್ರೀ|| ದಾಶರಥಿ ದೀಕ್ಷಿತ್
ಶ್ರೀ|| ಶಿವು
ಶ್ರೀ|| ಹೆಚ್ಲಿ.
ಶ್ರೀ|| ಗೋಪಾಲ ಪೈ.
ಶ್ರೀ|| ಶಾಸ್ತ್ರೀ

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ಬಿಡಿ ಪ್ರತಿ:— ಕೇವಲ ನಾಲ್ಕಾಣೆ

"ರಸವೇ ಜನನ"
ವಿರಸ ಮರಣ
ಸಮರಸವೇ ಜೀವನ"

ಎಂದು ಹಾಡಿದ ಕವಿ

**ಅಂಥಾ ಸಾಮರಸ್ಯ ಜೀವನದ ಆನಂದವನ್ನು ಸವಿಯಲು**

**A V.M. ಅವರ**

# ಜೀವನ

# [LIFE] (ತಮಿಳು)

**ಬರಲಿದೆ**

ರಾಷ್ಟ್ರೀಯ ಜೀವನದಲ್ಲಿ ನವೋದಯವಾದಾಗ ಎಂಥಾ ಭವ್ಯ ಮಾರ್ಪಾಟು ತಲೆದೋರಿತು ಎಂಬುದನ್ನು ರಸಮಯವಾಗಿ ಮನ ಕಲಕುವಂತೆ ಚಿತ್ರಿಸಲಾಗಿದೆ

ಭೂಮಿಕೆಯಲ್ಲಿ :

ಕುಮಾರಿ ವೈಜಯಂತಿಮಾಲಾ ★ ದ್ರೌಪತಿ
ಟಿ. ಆರ್. ರಾಮಚಂದ್ರ ★ ಸಾರಂಗಪಾಣಿ
ಸಹಸ್ರನಾಮಂ ★ ಲಲಿತ-ಪದ್ಮಿನಿ

ಮತ್ತಿತರರು.

ದಿಗ್ದರ್ಶನ:
**ಎ. ವಿ. ಮೇಯಪ್ಪನ್**

ಸ್ಟುಡಿಯೋ:
**ಎ. ವಿ. ಯಂ.**

—o—

RELEASE THROUGH

# TALLAM PICTURES CIRCUIT,

**GANDHI NAGAR - - BANGALORE 2.**

# "ನಾನು ಪ್ರತಿನಿತ್ಯವೂ ಟೀ ಕುಡಿಯುತ್ತೇನೆ

ಕಡಿಮೆ ಪಕ್ಷ ಎರಡು ಸಲವಾದರೂ ತಪ್ಪಿಸುವುದೇ ಇಲ್ಲ ಅದು ನನಗೆ ನವಚೈತನ್ಯವನ್ನು ಪ್ರಸಾದಿಸುತ್ತದೆ ಆರೋಗ್ಯ ವಿಷಯದಲ್ಲಿ ಅದರಿಂದ ಕೆಡುಕಾದ ಸಂದರ್ಭವನ್ನೇ ನಾನರಿಯೆ ಅಷ್ಟೇ ಅಲ್ಲ; ಬೆಳಗ್ಗೆ ಒಂದು ಬಟ್ಟಲು ಚಾ ಕುಡಿಯುವುದರಿಂದ ಉಲ್ಲಾಸವು ಮೂಡುವುದು. ಅಂದಿನ ಕಾರ್ಯಗಳನ್ನಾರಂಭಿಸಲು ಅವಶ್ಯವಾದ ಶಕ್ತ್ಯುತ್ಸಾಹಗಳನ್ನು ಅದು ಪ್ರಸಾದಿಸುವುದು."

(ದಸ್ಕತ್ತು) ಎಂ ಎನ್ ಸಾಹಾ



# ಟೀ



## ಚೇತನಸ್ಫೂರ್ತಿಗೆ

ಡಾ॥ ಮೇಘನಾಥ ಸಾಹಾ, ಡಿ ಎಸ್‌ಸಿ., ಎಫ್ ಆರ್ ಎಸ್. ರವರು ಪಲೀತ್ ಪ್ರೊಫೆಸರು ಮತ್ತು ಕಲಕತ್ತಾ ವಿಶ್ವವಿದ್ಯಾನಿಲಯದ ಫಿಜಿಕ್ಸ್ ಶಾಖೆಗೆ ಅಧ್ಯಕ್ಷರು. ಅವರು ಭಾರತ ವರ್ಷದ ವಿಖ್ಯಾತ ವೈಜ್ಞಾನಿಕ ಶಾಸ್ತ್ರ ನಿಪುಣರಲ್ಲೊಬ್ಬರು. ನ್ಯೂಕ್ಲಿಯರ್ ಫಿಜಿಕ್ಸನಬಗ್ಗೆ ಅವರು ಬರೆದ ಗ್ರಂಥಕ್ಕಾಗಿ ಅಂತರ್ಜಾತೀಯ ವಿಖ್ಯಾತಿಯನ್ನು ಪಡೆದರು. ಸ್ಟೆಲ್ಲರ್ ಸ್ಪೆಕ್ಟ್ರಾ ಸಿದ್ಧಾಂತ ವಿಷಯಕವಾಗಿ ಪ್ರತ್ಯೇಕ ಪ್ರಸಿದ್ಧರು. ಇದರ ದೆಸೆಯಿಂದಲೇ ಅವರಿಗೆ ರಾಯಲ್ ಸೊಸೈಟೀ ಫೆಲೋಷಿಪ್ ಲಭಿಸಿತು. 1945ರಲ್ಲಿ ನಡೆದ ರಷ್ಯಾ ವೈಜ್ಞಾನಿಕ ಪರಿಷತ್ತಿನ 220ನೇ ವಾರ್ಷಿಕ ಸಮಾರಂಭಕ್ಕೆ ಅವರು ಭಾರತ ವರ್ಷಕ್ಕೆ ಪ್ರತಿನಿಧಿಯಾಗಿ ಹಾಜರಾಗಿದ್ದರು.



ಇಂಡಿಯನ್ ಟೀ ಮಾರ್ಕೆಟ್ ಎಕ್ಸ್‌ಪಾನ್ಷನ್ ಬೋರ್ಡಿನವರಿಂದ ಪ್ರಕಟಿಸಲ್ಪಟ್ಟುದು

ITX—326—KN



ಸಂಪುಟ ೯ | ಸೆಪ್ಟೆಂಬರ್ ೧೯೪೯ | ಸಂಚಿಕೆ ೬

## ಕುಹಕಿಡಿಗಳು

ಕಾಂಗ್ರೆಸ್ ಅಧ್ಯಕ್ಷ ಪಟ್ಟಾಭಿ ಸೀತಾರಾಮಯ್ಯನವರಿಗೆ––ಎಂಬ ವಿಳಾಸ ವಿದ್ದ ಕಾಗದವನ್ನು ಅಂಚೆಯವರು ಪಂ|| ನೆಹ್ರೂ ಅವರಿಗೆ ತಲಪಿಸಿದರಂತೆ.

* * *

ವರಮಾನ ತೆರಿಗೆ ಹೆಚ್ಚುಮಾಡಿದ್ದನ್ನು ಸಂಬಂಧಪಟ್ಟವರಿಗೆ ಪತ್ರ ಮುಖೇನ ತಿಳಿಸಿದ್ದಾರಂತೆ.

––ಅವಶ್ಯಕವಿದ್ದಲ್ಲಿ—ಹತ್ತಿರ ಸಂಬಂಧಿಗಳಿಗೂ ತಿಳಿಸುತ್ತಾರಂತೆ.

* * *

ರಾಮೋತ್ಸವ ಮುಕ್ತಾಯ ಸಮಾರಂಭ.

ಶ್ರೀ ಎ. ರಾಮಸ್ವಾಮಿ ಮೊದಲಿಯಾರರ ಭಾಷಣ—(ಪತ್ರಿಕೆ)

—ಮುಕ್ತಾಯ ಭಾಷಣವಿರಬಹುದು!

* * *

'ಪ್ರಪಂಚ ಬ್ಯಾಂಕ್' ಸಂಸ್ಥೆಯು ಭಾರತಕ್ಕೆ ಮೂವತ್ತೆಂಟು ಮಿಲಿಯನ್ ಡಾಲರ್ ಸಾಲ ಕೊಟ್ಟರಂತೆ.

—ಸಾಮ್ರಾಜ್ಯ ಶಾಹಿಯ ಮೊದಲ ಆಯುಧ—ಸಾಲ ಕೊಡೋದಲ್ಲವೇ.

* * *

ಪಾಂಡಿಚೆರಿಯು ಭಾರತದೊಡನೆ ಇನ್ನೂ ವಿಲೀನವಾಗದೇ ಇರುವುದಕ್ಕೆ ಭಾರತದ ಪಾನ ನಿರೋಧ ಚಳುವಳಿಯೇ ಕಾರಣ ಎಂದು ಹೇಳುವುದು ಶುದ್ಧ ಕುಹಕ.

*      *      *

ಜಪಾನಿನ ಈಜುಗಾರರು ಅಮೇರಿಕಾದ ಸ್ಪರ್ಧೆಗಳಲ್ಲಿ ನಾಲ್ಕು ಮುಖ್ಯ ಸ್ಥಾನಗಳನ್ನು ಗಳಿಸಿದರಂತೆ.

—ಪುರಂದರ ದಾಸರು ಹಾಡಲಿಲ್ಲವೇ?—ಯುದ್ಧಾನಂತರ 'ಈಸಬೇಕು **"ಇದ್ದು"** ಜೈಸಬೇಕು' ಅಂತ.

*      *      *

ಈ ದಿನ ಹೋದರೆ, ಆಸ್ಪತ್ರೆಯಲ್ಲಿ ಡಾಕ್ಟರು ಸಿಕ್ಕುತಾರೆಯೇ? ಎಂದು ಒಬ್ಬ ರೋಗಿ ಜ್ಯೋತಿಷ್ಯನ ಹತ್ತಿರ ಹೋಗಿ ಪ್ರಶ್ನೆ ಕೇಳುತ್ತಿದ್ದನಂತೆ.

*      *      *

ವ್ಯಾಪಾರೋದ್ಯಮದಲ್ಲಿ ಏಕೈಕ ಚಿತ್ತರಾಗಿ ಜೀವನ ಸಂಗ್ರಾಮ ನಡೆಸ ಬೇಕು ಎಂದು ವ್ಯಾಪಾರೋತ್ತಮರು ಹೇಳಿದರು.

—"ಜಯಮೇವ ಸತ್ಯಂ" ಅಲ್ಲವೇ?

*      *      *

ಫುಟ್‌ಬಾಲ್ ಪಂದ್ಯಗಳಾಗೋವಾಗ ಆಟಗಾರರೆಲ್ಲಾ ಸಮವಸ್ತ್ರ ಧರಿಸು ತ್ತಾರೆ—ಆದರೆ 'ಅಂಪೈರ್' ಮಾತ್ರ ಸಾಧಾರಣ ಬಟ್ಟೆ ಹಾಕಿರುತ್ತಾನೆ. ಪ್ರೇಕ್ಷ ಕರು ಸುಲಭವಾಗಿ ಗುರ್ತಿಸಲು ಅವನಿಗೆ ಕೆಂಪು ವಸ್ತ್ರ ಹಾಕಬೇಕು ಎಂದೊಬ್ಬರು ಬರೆದಿದ್ದಾರೆ.

*      *      *

ಪಂ|| ನೆಹ್ರೂ ಅವರು ಬರ್ನಾರ್ಡ್ ಷಾ ಅವರಿಗೆ ಮಾವಿನ ಹಣ್ಣು ಕೊಟ್ಟರಂತೆ.

—ಅಮೇರಿಕಾಕ್ಕೆ ಹೋದಾಗ ಟ್ರೂಮನ್ನರಿಗೆ ಸಕ್ಕರೆ ಗೆಣಸು ಕೊಡುತ್ತಾ ರೆಂಬುದು ಸುಳ್ಳಂತೆ.

*      *      *

—o—

# ಉರಿಗಾಳು

---

"ಮುಂದಿನ ಚುನಾವಣೆಯ ಭವಿಷ್ಯವನ್ನು ಮಂತ್ರಿಗಳು ತಮ್ಮ ದೃಷ್ಟಿಯಲ್ಲಿಟ್ಟುಕೊಳ್ಳಲೇ ಬಾರದು" (ಡಾ|| ಪಟ್ಟಾಭಿ ಸೀತಾರಾಮಯ್ಯ) ನಮ್ಮ ಮಂತ್ರಿಗಳಂತೂ, ಅದನ್ನು ಇಟ್ಟುಕೊಂಡೇ ಇಲ್ಲ.

* * *

"ಕಮಿಷನರೂ ನಗರ ಸಭಾಧ್ಯಕ್ಷರೂ ಬಡಾವಣೆಗಳನ್ನು ಸಂದರ್ಶಿಸುವಾಗ ಉದ್ದಕ್ಕೂ ನಡೆದುಕೊಂಡೇ ಹೋಗುತ್ತಿರುವುದು ಸ್ತೋತ್ರಾರ್ಹ" (ಪತ್ರಿಕೆ) ಕಾರು ಮುರಿಯುವಷ್ಟು ರಸ್ತೆಗಳು ಹೊಲಸಾಗಿರಬೇಕೆಂದು ತೋರುತ್ತದೆ.

* * *

"ಹಿಂದಿಯನ್ನೇ ರಾಷ್ಟ್ರಭಾಷೆಯಾಗಿ ಅಂಗೀಕರಿಸುವುದೊಳ್ಳೆಯದು. ಆದರೆ, ಅದಕ್ಕೆ ಉತ್ತರ ದಕ್ಷಿಣ ಪ್ರಾಂತ ಭಾಷೆಗಳ ಶಬ್ದಗಳನ್ನೂ ಇಂಗ್ಲೀಷಿನಿಂದ ಅಸಂಖ್ಯ ಶಬ್ದಗಳನ್ನೂ ಸೇರಿಸಿಕೊಳ್ಳತಕ್ಕದ್ದು"....(ಡಾ|| ರಾಜೇಂದ್ರ ಪ್ರಸಾದ್) ಹಾಗಾದರೆ, ಆ ಹಿಂದಿ ಬೆಂಗಳೂರು ಕನ್ನಡವೇ ಆಯಿತಲ್ಲಾ !

* * *

"ಸ್ವರಾಜ್ಯ ಬಂದ ಮೇಲೆ, ಜನರಲ್ಲಿ ಸರಕಾರವನ್ನು ಟೀಕೆ ಮಾಡುವ ಅಭ್ಯಾಸ ಬಂದುಬಿಟ್ಟಿದೆ" (ಶ್ರೀ ಭಾಷ್ಯಂ) ...ತಪ್ಪು! ತಪ್ಪು! ಇನ್ನು ಮೇಲೆ, ಭಾಷ್ಯ ಬರೆಯೋಣ.

* * *

ಭಾಷಾವಾರು ಪ್ರಾಂತ ರಚನೆಯಾಗದಿರುವುದಕ್ಕೆ, ಒಬ್ಬರ ಭಾಷೆ ಒಬ್ಬರಿಗೆ ಅರ್ಥವಾಗದಿರುವುದೇ ಕಾರಣವಂತೆ.

* * *

ಖರ್ಚು ವೆಚ್ಚಾದಿಗಳನ್ನು ಕುರಿತು ಸಲಹೆ ಮಾಡಲು ಸರ್ಕಾರ ಒಂದು ಕೇಂದ್ರ ಸಮಿತಿಯನ್ನೇರ್ಪಡಿಸಿದೆ........ಮನೆ ಮನೆಗೂ ಇಂಥ ಒಂದು ಸಮಿತಿ ಅವಶ್ಯಕ.

* * *

"ನಮ್ಮ ಆಹಾರ ಅಭಾವಕ್ಕೆ ಕೆರೆ ಕುಂಟೆಗಳೇ ಉತ್ತಮ ಪರಿಹಾರ" (ಮಂತ್ರಿಗಳ ಭಾಷಣ) ಅನೇಕರು ಹೋಗಿ ಬೀಳುತ್ತಲೂ ಇದಾರೆ.

* * *

ಶಿರೋನಾಮೆ: "ಎರಡು ವರ್ಷಗಳ ಸ್ವಾತಂತ್ರ್ಯ; ಒಂದು ಸಿಂಹಾವಲೋಕನ....ಹಯಗ್ರೀವರಿಂದ"

* * *

"ಚಾಡಿ" ಎಂಬ ಕನ್ನಡ ಚಲಚ್ಚಿತ್ರವನ್ನು ಬೊಂಬಾಯಲ್ಲಿ ರಚಿಸುವರಂತೆ ....ಇದರಿಂದ, ನಮ್ಮಲ್ಲಿ ಅದಕ್ಕೆ ಬೇಕಾದ ಸಾಮಗ್ರಿ ಇಲ್ಲವೆಂದು ತಿಳಿಯಕೂಡದೆಂದು ಒಬ್ಬರು ಮಹನೀಯರು ಬರೆದಿದಾರೆ.

* * *

"ಎನ್ನ ವರೊಲಿದು ಹೊನ್ನ ಶೂಲದಲಿಕ್ಕಿರಿದರೆನ್ನ ಹೊಗಳಿ ಹೊಗಳಿ" ಎಂದು ಹೇಳಿದವರು, ಒಬ್ಬರು ಕಾಂಗ್ರೆಸ್ ಮಂತ್ರಿಗಳಲ್ಲವೆಂದು, ಈಗ ಖಚಿತವಾಗಿ ಗೊತ್ತಾಗಿದೆ.

* * *

ಸರ್ಕಾರೀ ನೌಕರರಿಗೆ ತುರುತ್ ಸಾಲ ಒದಗಿಸಿ ಪೇಚಾಡುತ್ತಿರುವ ಬ್ಯಾಂಕಿನವರೂ, ಮಾರ್ವಾಡಿಗಳೂ, ಇತರರೂ ಇಷ್ಟರಲ್ಲೇ ಅವಾರಾ ಕಚೇರಿಗೆ ಮೆರವಣಿಗೆ ಹೊರಟು ತಮ್ಮ ಕಷ್ಟ ನಿವಾರಣೋಪಾಯವನ್ನು ಹುಡುಕುವರಂತೆ

* * *

ಪ್ರೈಮರಿ ಶಾಲಾ ಮಾಸ್ತರೊಬ್ಬರು ಈಚೆಗೆ ಸಖತ್ ಖಾಯಿಲೆಯಿಂದ ಗುಣ ಹೊಂದಿದರಂತೆ ...ಪಾಪ !

* * *

ನಿರಾಶ್ರಿತರ ಬಗ್ಗೆ ಮಾಡಿರುವ ಕಾನೂನುಗಳನ್ನು ಇಂಡಿಯಾ ದೇಶದ ಆದ್ಯಂತ ಚಾಲ್ತಿಗೆ ತರುವರಂತೆ.. .ಹಾಗಾದರೆ, ನಮ್ಮಂಥ ಪ್ರಜೆಗಳಿಗನುಕೂಲವಾಗಬಹುದು.

———o———

# " ನಿಶಿ ರಾತ್ರೇಲಿ "

---

ಅಂದ್ರೆ ! ಅಂದ್ರೆ !
ಬೇಗೇಳಿ ಅಂದ್ರೆ
ಸರಸರ ಅಂದ್ಹಾಗ್ಹಾಯ್ತು
ಬೇಗ ದೀಪ ಹಚ್ಚಿ ಅಂದ್ರೆ.
ತಲೆದಶೀಲೆ ಸರಸರ ಅಂದಿದ್ದು.
ಕಿಟಕಿ ಹಾಕಿ ಅಂದ್ರೆ—ಎಲ್ಲಾರೂ ಹೋಗ್ಬಿಟ್ಹ್ವಾತು !

ಹಾಸಿಗೆ ಎಲ್ಲಾ ಕೊಡವಿದ್ದಾಯ್ತು.
ಜಮುಖಾನ ಎಲ್ಲಾ ಹುಡುಕಿದ್ದಾಯ್ತು.
ಟ್ರಂಕು ಪೆಟ್ಟಿಗೆ ಸಂದೆಲ್ಲಾ
ಶೋಧಿಸಿದ್ದಾಯ್ತು.

ಎಲ್ಲೂ ಇಲ್ಲಾ ಅಂದ್ರೆ. ಏನೂ ಇಲ್ಲ ಅಂದ್ರೆ
ಕಿಟಕಿ ತೆಗೀರಿ ದೀಪ ಆರಿಸಿ
ಮಲಕೊಳ್ಳೋಣ.

ಕಿಟಕಿ ತೆಗೆದು, ಅಯ್ಯೋ !
ಇಲ್ಲೇ ಇದೆಯಲ್ಲೇ ಕೆಂಜೇಳು.
ಹೋಗಲಿ ಬಿಡು ಸತ್ತೇ ಹೋಗಿದೆ.
ಕಿಟಕಿ ಹಾಕಿದಾಗ ಹೋಗಿರಬೇಕು.

---

# ಸ್ವಾತಂತ್ರ್ಯ ದಿನೋತ್ಸವದ ವಿಶೇಷ ಸಂಚಿಕೆಯಿಂದ

"....ಹಿಂದೂಸ್ತಾನ ಸ್ವತಂತ್ರವಾಗಿ ಎರಡು ವರ್ಷಗಳಾಗಿವೆ. ಸ್ವಾತಂತ್ರ್ಯ ಪಡೆಯುವುದಕ್ಕಿಂತ ಅದನ್ನು ಕಾಪಾಡಿಕೊಂಡು ಬರುವುದು ತುಂಬಾ ಕಷ್ಟ. ಹಿಂದೀಯರು ಧೃಢಕಾಯರಾಗಬೇಕು. ತಮ್ಮ ಸ್ವಾತಂತ್ರ್ಯವನ್ನ ಕಾಪಾಡಿ ಕೊಳ್ಳಬೇಕು. ಆದ್ದರಿಂದ ನಮ್ಮ ಬಲವರ್ಧಕ "ಹಿಮೋ ಬಲೋ ಮಾಲ್ಟ್"ನ್ನ ಸೇವಿಸಿರಿ"....

*　　　*　　　*

...."ಈಗ ಬಂದಿರುವ ಸ್ವಾತಂತ್ರ್ಯ, ರಾಜಕೀಯ ಸ್ವಾತಂತ್ರ್ಯ ಮಾತ್ರ. ನಿಜವಾದ ಸ್ವಾತಂತ್ರ್ಯ ಇನ್ನೂ ಬಂದಿಲ್ಲ. ನಿಜವಾದ ಸ್ವಾತಂತ್ರ್ಯವೆಂದರೆ ಆರ್ಥಿಕ ಸ್ವಾತಂತ್ರ್ಯ. ಅಂದರೆ ನಮ್ಮ ಹಣ ಹೊರಗೆ ಹೋಗದೆ ನೋಡಿ ಕೊಳ್ಳುವುದೇ ಆರ್ಥಿಕ ಸ್ವಾತಂತ್ರ್ಯ—ನಿಜ ಸ್ವಾತಂತ್ರ್ಯ. ಆದ್ದರಿಂದ ಈ ನಿಜ ಸ್ವಾತಂತ್ರ್ಯ ಬರಲಿಕ್ಕೆ, ನಮ್ಮ ಹಣ ನಮ್ಮಲ್ಲೆ ಇರಲಿಕ್ಕೆ ಪ್ರಯತ್ನಿಸಿ. ಈ ಸ್ವಾತಂತ್ರ್ಯ ಸಂಗ್ರಾಮ ಸಿದ್ಧಿಸಬೇಕಾದರೆ ಸ್ವದೇಶಿ "ಜನತಾ" ಬೀಡಿಗಳನ್ನೆ ಸೇದಿರಿ"....

*　　　*　　　*

...."ಭಾರತಕ್ಕೆ ಸ್ವಾತಂತ್ರ್ಯ ಬಂದು ೨ ವರ್ಷಗಳಾದರೂ ಭಾರತ ಸ್ತ್ರೀಯರಿಗೆ ಸ್ವಾತಂತ್ರ್ಯ ದೊರೆತಿಲ್ಲ. ಭಾರತ ಮಹಿಳೆಯರಿಗೆ ಎಂದು ಅಡಿಗೆ ಮನೆಯಲ್ಲಿನ ತೊಂದರೆಗಳು ತಪ್ಪುವವೋ ಅಂದೇ ಭಾರತೀಯರೆಲ್ಲರೂ ನಿಜ ವಾದ ಸ್ವಾತಂತ್ರ್ಯ ಅನುಭವಿಸುವರು. ಆ ಸ್ವಾತಂತ್ರ್ಯ ಬರಬೇಕಾದರೆ ನಮ್ಮ ಹೊಗೆಯ ತೊಂದರೆಯಿಲ್ಲದ, ಸೌದೆಯ ಭಂಗವಿಲ್ಲದ "ಜೈ ಹಿಂದ್" ಸ್ಟೋವುಗಳನ್ನೇ ಉಪಯೋಗಿಸಿರಿ."....

*　　　*　　　*

...."**ಜೈ ಹಿಂದ್!** ಈ ಆಗಸ್ಟ್ ೧೫ರ ದಿನ, ಈ ಸ್ವಾತಂತ್ರ್ಯ ನಮಗೆ ಸಿಗಲಿಕ್ಕೆ ಕಾರಣರಾದ ಹುತಾತ್ಮರೆಲ್ಲರನ್ನೂ ನೆನಸಿಕೊಳ್ಳೋಣ—ಜೈ ಹಿಂದ್ ಮಿಲ್ಸ್, ಉತ್ತಮ ಬಟ್ಟೆ ತಯಾರಕರು ಮತ್ತು ವ್ಯಾಪಾರಗಾರರು, ಇವರಿಂದ ಪ್ರಚುರಿಸಲ್ಪಟ್ಟಿದೆ."....

"ಸ್ವಾತಂತ್ರ್ಯ ಭಾರತೀಯರ ಜವಾಬ್ದಾರಿ ತುಂಬಾ ಹೆಚ್ಚಿದೆ. ಅವರು ತಮ್ಮ ಜೀವನವನ್ನ ರೂಪಿಸಿಕೊಳ್ಳುವುದರಲ್ಲಿ ತುಂಬಾ ಜವಾಬ್ದಾರಿಯಿಂದ ವರ್ತಿಸಬೇಕು. ನಿಜವಾದ ಸಂಸ್ಕೃತಿ ನಮ್ಮಲ್ಲಿ ಹೊರಹೊಮ್ಮಬೇಕಾದರೆ ನಾವು ಸರಿಯಾದ ವಾಕ್ಪಟವನ್ನ ನೋಡಬೇಕು. ಅಂತೇ ಇಂದೇ ನಮ್ಮ "ವೇಶ್ಯಾ" ಚಿತ್ರವನ್ನ ನೋಡಿ."....

*  *  *

."ವಂದೇ ಮಾತರಂ! ಮಹಾತ್ಮಾ ಗಾಂಧೀಕಿ ಜೈ!! ನೇತಾಜಿ ಸುಭಾಷ ಚಂದ್ರಬೋಸಕೀ ಜೈ!!! ಈ ಆಗಸ್ಟ್ ೧೫ರ ಸಂಭ್ರಮವನ್ನು ನಮ್ಮ "ಲಕ್ಷ್ಮಿ" ಬ್ರ್ಯಾಂಡ್ ಕ್ರಷ್ ಕುಡಿದು ನೆರವೇರಿಸಿ."....

*  *  *

"....ನಮಗೆ ಸ್ವಾತಂತ್ರ್ಯ ಸಿದ್ಧಿಸಿಕೊಟ್ಟವರು ಮಹಾತ್ಮಾ ಗಾಂಧೀಜಿ. ಆ ಯುಗ ಪುರುಷನ ಚಿತ್ರವನ್ನ ಇಂದು ಪೂಜಿಸುವುದು ಭಾರತೀಯರಾದ ನಮ್ಮ ಕರ್ತವ್ಯ. ಗ್ಲೇಜ್ ಕಾಗದದ ಮೇಲೆ ಪ್ರಿಂಟಾಗಿರುವ ತ್ರಿವರ್ಣ ಚಿತ್ರಗಳು ಬೆಲೆ ಚಿತ್ರವೊಂದಕ್ಕೆ 3 ರೂಪಾಯಿ. ಇಂದೇ ಬರೆಯಿರಿ : ಮಹಾತ್ಮಾ ತಸಬೀರು ಕಂಪೆನಿ.". .

*  *  *

...."ಸ್ವಾತಂತ್ರ್ಯವೆಂದರೆ ಮುಖ್ಯವಾಗಿ ಆರ್ಥಿಕ ಭದ್ರತೆ. ಆ ಆರ್ಥಿಕ ಸುಭದ್ರತೆ ಉಂಟಾಗಬೇಕಾದರೆ, ನಾವು ವಿಮೆ ಮಾಡುವುದೊಂದೇ ಉಪಾಯ. ಆದ್ದರಿಂದ ಈ ಶುಭ ದಿನದಲ್ಲೆ ನಮ್ಮ "ಮಹಾತ್ಮಾ ಇನ್ಷ್ಯೂರೆನ್ಸ್ ಕಂಪೆನಿಯಲ್ಲೇ ವಿಮೆ ಮಾಡಿರಿ."....

*  *  *

...."ಜೈ ಹಿಂದ್! ಈ ಸ್ವಾತಂತ್ರ್ಯ ವರ್ಧಂತಿಯ ಶುಭ ಮಹೋತ್ಸವದಲ್ಲಿ ಭಾರತೀಯರೆಲ್ಲರ ಮನೆಯಲ್ಲೂ ನಮ್ಮ "ಶಾಂತಿ" ವಿದ್ಯುದ್ದೀಪಗಳು ಬೆಳಗಲೆಂದು ಹಾರೈಸುತ್ತೇವೆ".

*  *  *

"....ಮಕ್ಕಳು ಮೊದಲು ಮುದುಕರುವರಿವಿಗೆ ಎಲ್ಲರಿಗೂ ಆನಂದದಾಯಕವಾದ ಈ ಶುಭ ದಿನದಲ್ಲಿ ನಮ್ಮ "ಕೃಷ್ಣಾ" ಬ್ರಾಂಡ್ ಮಿಠಾಯಿಗಳು, ಈ ಆನಂದವನ್ನ ಮತ್ತೂ ಹೆಚ್ಚಿಸಲೆಂದು ಪ್ರಾರ್ಥಿಸುತ್ತೇವೆ".

* * *

...."ಭಾರತೀಯರ ದೇಹಧಾರ್ಢ್ಯ ಹೆಚ್ಚಬೇಕಾದ್ದು ಮೊದಲನೇ ಕೆಲಸ. ಈ ಉದ್ಯಮದಲ್ಲಿ ನಮ್ಮ ಶುಚಿ ರುಚಿಯಾದ ಪಲಾವ್ ಸೇವಿಸುವುದೇ ಅತ್ಯುತ್ತಮ. ವಿವರಗಳಿಗೆ ಬರೆಯಿರಿ—'ಮಹಾತ್ಮಾ ಮಟನ್ ಸ್ಟಾಲ್'"....

* * *

...."ಇಂದಿಗೆ ಸ್ವಾತಂತ್ರ್ಯ ಬಂದು ೨ ವರ್ಷಗಳಾದವು. ಇದೋ! ಇಂದಿನಿಂದ ನಿಮಗೆ ರುಚಿ ಸ್ವಾತಂತ್ರ್ಯವನ್ನ ನಾವು ನೀಡಲಿದ್ದೇವೆ! ನಿಮ್ಮ ಊಟವು ಮತ್ತಷ್ಟು ರಂಜಿಸಲಿಕ್ಕೆ ನಮ್ಮ ಉಪ್ಪಿನ ಕಾಯನ್ನೇ ಉಪಯೋಗಿಸಿರಿ—ರಾಜಾಜಿ ಕಾಂಡಿಮೆಂಟ್ ಸ್ಟೋರ್ಸ್". .

* * *

...."ಈ ಸ್ವಾಂತಂತ್ರ್ಯ ದಿನ, ನಿಮಗೆ ನಿಮ್ಮ ನಿಮ್ಮ ಉಡುಪಿನ ನವೀನತೆಯ ಸ್ವಾತಂತ್ರ್ಯವನ್ನ ನಾವು ಈ ಮೂಲಕ ನೀಡಿದ್ದೇವೆ. ಇಂದೇ ಒಮ್ಮೆ ಭೇಟಿ ಕೊಡಿರಿ—ನೆಹ್ರೂ ಸಿಲ್ಕ್ ಪ್ಯಾಲೇಸ್"....

* * *

...."ಜೈ ಹಿಂದ್! ಕಳೆದೈವತ್ತು ವರ್ಷಗಳಿಂದ ನಾವು ಹೂಡಿದ ಹೋರಾಟ ಸಿದ್ಧಿಸಿ ಇಂದಿಗೆ ೨ ವರ್ಷಗಳಾದುವು. ಇಂದಿನಿಂದಲಾದರೂ ನಮ್ಮ ಸ್ವದೇಶಿ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದು ನಮ್ಮ ಕರ್ತವ್ಯ. ಅಂತೇ, ಇಂದಿನಿಂದಲೇ "ಸುಭಾಷ್" ಸಿಗರೇಟು ಸೇದಲು ಆರಂಭಿಸಿರಿ.".. .

ಇತ್ಯಾದಿ

—"ರಂಗು"

[ನಮ್ಮ ಸ್ವಾತಂತ್ರ್ಯ ಸಂಚಿಕೆ ಕೊಂಡು. ??] ಸಂ.

* * *

———o———

# "ಗುಂಡನ ಹೆಂಡತಿ"

ಮದುವೆಯಾಗುವ ಮುನ್ನ ಹಾಸನದ ಗುಂಡಪ್ಪನನು
ಹಿಡಿಯ ಬಲ್ಲವರಾರು ? ನೀವೇ ಹೇಳಿ !

ಎಂ ಎಸ್ಸಿ ಪರೀಕ್ಷೆಯ ಮಾಡಿ—ಐಸಿಎಸ್ಸಿಗೆ ಹೋಗುವೆನೆಂದು
ಬಹು ಹುಮ್ಮಸ್ಸಿನಲ್ಲಿದ್ದ—ನಮ್ಮ ಗುಂಡ.

ಮದುವೆ ಮಾಡುವೆನೆಂದು ಮುದಿ ತಾಯಿ ಹಂಬಲಿಸೆ
ನಮ್ಮ ಗುಂಡನಾ 'ಒಪ್ಪುವಳಿ'ಗಳ ಕೇಳಿ

'ನನ್ನ ಹೆಂಡತಿ ಕಡೆಗೆ ಪದವೀಧರಳಿರಬೇಕು
ರೂಪಿನಲಿ ಬಲು ಸುಂದರಳಿರಬೇಕು.

ಕಾಮಿನೀ ಕೌಶಲಳ ಫೀಚರ್ಸಿರಬೇಕು ಸುರೈಯಳವದನ
ವನಮಾಲಳಾ ಸುಂದರ ನಯನಗಳು.'

ನರ್ಗೀಸಳಾ ದಿಟ್ಟತನ—ನೂರ್ಜಹನಳ ಮಧುರ ಕಂಠ
ಪುಷ್ಪಹಾನ್ಸಳ—ಇನ್ನೋಸೆನ್ಸ್—ಉ.

ಸಂಗೀತವನೆ ಇಷ್ಟೈವಾಣಿ ಎಂಎಸ್ಸಳ ಮೀರಿಸಿರಬೇಕು
ಸಂಸ್ಕೃತಿಯಲಿ ದೇವಿಕಾ ರೋರಿಕ್.

ಪತಿಪರಾಯಣೆ ಇರಬೇಕು? ಅಮರ ಕಸ್ತೂರಬಾ
ಹೆಜ್ಜೆಯನು ತಪ್ಪದೇ ನಡೆಯಬೇಕು.

ಗುಂಡನಾ ತಾಯಿ ಕೊರಗಿನಲೆ ತೀರಿಕೊಂಡರು ಪಾಪ !
ಮಗನ ಈ ಗಗನ ಕುಸುಮವನು ಕಂಡು.

ಕಡೆಗೆಂದೋ ಮದುವೆಯಾದನು ಗುಂಡ. ಆಹ್ವಾನ ಕಳುಹಿದ್ದ
ಅವನ ಲಗ್ನಪತ್ರಿಕೆಯ ಬಿಚ್ಚಿನೋಡೆ

ಗುಂಡನಾ ಮಡದಿ—ಅವನ ಚೆಂದುಳ್ಳಿ ಹೆಣ್ಣು
ಸಾರೋಹಳ್ಳಿ ಶ್ಯಾನುಭೋಗರ ಮಗಳು—ಫಸ್ಟ್ ಮಿಡಲ್ ಫೆಯ್ಲ್ಡು

—ಡಿ. ವೆಂಕಟೇಶಮೂರ್ತಿ.

—o—

# "ಅಮಿಲ್ದಾರ್ ರಾಜಣ್ಣ"

ಏನು ಶ್ರದ್ಧೆ! ಏನು ಉತ್ಸಾಹ! ಏನು ಬುದ್ಧಿವಂತಿಕೆ! ಅಂತೀರಿ ನಮ್ಮ ಅಮಿಲ್ದಾರರಿಗೆ. ನಮ್ಮ ತಾಲ್ಲೂಕಿಗೆ ದೇವರು ಒಂದ ಹಾಗೆ ಬಂದರು ರಾಜಣ್ಣನೋರು. ಕಹಳೆ ಕೊಂಬು ಊದಿಸಿಕೊಂಡು, ಮಶಾಲ್ಟಿ ಹತ್ತಿಸಿ ಕೊಂಡು, ಒಂದು ತಟ್ಟು ಏರಿಕೊಂಡು, ಹೂವಿನ ಹಾರಗಳನ್ನು ಹಾಕಿಕೊಂಡು ಬಂದರು ನಮ್ಮೂರಿಗೆ. ಬಂದ ಮೂರು ತಿಂಗಳಿಂದ ಕಛೇರಿಯನ್ನು ಗುಡಿ ಸೋದಕ್ಕೆ ಸ್ವಯಂ ಅವರ ಸಮ್ಮುಖದಲ್ಲೇ ಕಾರ್ಯಕ್ರಮಗಳು ಏರ್ಪಾಡಿ ಸಲ್ಪಟ್ಟಿದ್ದುವು.

ಆಗ ನೋಡಿ! ಭಾರತದ ಗವರ್ನರ್ ಜನರಲ್ ಶ್ರೀ ಚಕ್ರವರ್ತಿ ರಾಜ ಗೋಪಾಲಾಚಾರ್ರು ಒಂದು ಜತೆ ಎತ್ತಿನ ಹಿಂದೆ ಉಳುತ್ತಿದ್ದ ಚಿತ್ರ ಅವರ ಕಣ್ಣಿಗೆ ಬಿತ್ತು, ಒಂದು ಪತ್ರಿಕೆಯಲ್ಲಿ. "ಅನ್ನಾತ್ ಬಿಸ್ನಮಿದಂ ಇತ್ಯಾದಿ ವಾಕ್ಯಗಳನ್ನು ಓದಿದರು. ಅವರ ಶ್ರದ್ಧೆ ಅವರ ಉತ್ಸಾಹ ಎಷ್ಟು ಹೆಚ್ಚಿತು ಅಂತೀರಿ! ರುಮಾಲು ಕೆರೆದೂ ಕೆರೆದೂ ಜರಿ ಕಿತ್ತುಹೋಯಿತು ಕಡೇಗೆ ಒಂದು ಊರ ಹಿರಿಯರ ಸಭೆ ನಡೆಸಿದರು. ನಮ್ಮ ಗ್ರಾಮದಿಂದ ನಾವು ಕೇಂದ್ರಕ್ಕೆ ಹತ್ತು ಮೂಟೆ ರಾಗಿ ಹೆಚ್ಚಾಗಿ ಕಳಿಸಲೇ ಬೇಕು ಎಂದು ಸಿದ್ಧಾಂತ ಮಾಡಿದರು.



ತಾವೇ ಖುದ್ದಾಗಿ ತಾಲ್ಲೂಕು ಕಛೇರಿಯ ಮುಂದೆ ಇದ್ದ ಜಾಗದಲ್ಲಿ ಉತ್ತು ಬಿತ್ತು ಬೆಳೆ ಬೆಳೆಯುವುದನ್ನು ಶಾಸ್ತ್ರೀಯವಾಗಿ ಮಾಡಿ ಈ ಗ್ರಾಮದ ರೈತರಿಗೆಲ್ಲಾ ಮೇಲುಪಂಙ್ತಿಯಾಗುತ್ತೇನೆಂದು ಡಂಗುರ ಸಾರಿದರು.

ಮಾರನೇ ದಿನ ರಾಜಣ್ಣನವರಲ್ಲ ನೇಗಿಲ ಹಿಂದೆ ನಿಂತವರು!—ಖಾಸಾ ಅಮಾಲ್ದಾರರೇ!! ಅಂದರೆ ಅವರ ಸರ್ಕಾರಿ ಉಡುಪನ್ನು ಧರಿಸಿ ಉಳಲು ಬಂದು ನಿಂತರು. ಕತ್ತಿಗೆ ಗೆಜ್ಜೆ ಕಟ್ಟಿದ್ದ, ಕೊಂಬಿಗೆ ಬಣ್ಣ ಹಾಕಿದ್ದ, ಗೊರಸಿಗೆ ವರತರೇಖು ಅಂಟಿಸಿದ್ದ ಒಂದು ಜತೆ ಎತ್ತಿನ ಹಿಂದೆ ನೇಗಿಲು ಹಿಡಿದು ನಿಂತರು. "ಎಲ್ಲಿ! ಫೋಟೋ ತೆಗೆಯುವವರೆಲ್ಲಾ ತೆಗೆದುಕೊಳ್ಳಿ!!" ಎಂದರು. ಅವರ ಮಗ ಫೋಟೊ ಹಿಡಿದ. ಹಿಡಿದ ರಭಸಕ್ಕೋ, ಎತ್ತು ಭಂಗಿಸಿದ್ದುದರಿಂದಲೋ, ಅಥವಾ ಮಣ್ಣು ಹೆಂಟೆಮೇಲೆ ಕಾಲು ಜಾರಿದ್ದ ರಿಂದಲೋ ಫೋಟೋದಲ್ಲಿ ಅಮಾಲ್ದಾರರು ಬೀಳುವುದಿರಲಿ, ನೆಲದ ಮೇಲೇ ಬಿದ್ದರು. ಉತ್ಸಾಹಶಾಲಿಗಳು ಅಮಾಲ್ದಾರರು! ಬಿದ್ದರೂ ಮಣ್ಣಾಗದೇ ಇದ್ದ ಮಾಸೆಯನ್ನು ತಿರುವುತ್ತಾ ಎದ್ದು—ಭಾಷಣ ಮಾಡಿದರು.

"ರೈತ ಬಾಂಧವರೇ! ಈ ದಿನ ನಿಮ್ಮ ಜತೆಯಲ್ಲಿ ನಿಮ್ಮಂತೆ ನಾನೂ ನೇಗಿಲ ಯೋಗಿಯ ಶಿಷ್ಯನಂತೆ ಭೂಮಾತೆಯನ್ನು ಬೇಡಲು ನಿಂತಿರುತ್ತೇನೆ. ನನ್ನ ಮೇಲ್ಪಙ್ತಿಯನ್ನನುಸರಿಸಿ, ನೀವೂ ಹೆಚ್ಚು ಆಹಾರ ಬೆಳೆಯಬೇಕು. ನಿಮ್ಮ ತಿಳಿವಳಿಕೆಗಾಗಿಯೇ ಒಂದು ಪುಸ್ತಕ ಭಂಡಾರವನ್ನು ಏರ್ಪಡಿಸಿದ್ದೇನೆ.

ಮಳೆ ಯಾವಾಗ ಬೀಳುತ್ತದೆ. ಯಾವ ಮಳೆಯಲ್ಲಿ ಬೀಜ ಬಿತ್ತಬೇಕು ಇಂತಹ ವಿಷಯಗಳನ್ನೊಳಗೊಂಡ, ಪ್ರವೀಣರಿಂದ ಬರೆಯಲ್ಪಟ್ಟ ಪುಸ್ತಕಗಳು ಅರಿವೆ.

ಎಂತಹ ಗೊಬ್ಬರ ಹಾಕಿದರೆ ಬೆಳೆ ಹೆಚ್ಚಾಗಿ ಬರುತ್ತದೆ. ಅಮೇರಿಕಾದಲ್ಲಿ ಏನು ಗೊಬ್ಬರ ಹಾಕುತ್ತಾರೆ. ವಿಲಾಯಿತಿಯಲ್ಲಿ ಹೇಗೆ ಮಾಡುತ್ತಾರೆ, ಜರ್ಮನಿ ಯಲ್ಲಿ ಹೇಗೆ ಎಮುಕೆ ಉಪಯೋಗಿಸುತ್ತಿದ್ದರು, ಜಪಾನಿನ ವಿಧಾನ, ಇತ್ಯಾದಿ ವಸ್ತುಗಳೆಲ್ಲವೂ ಶೇಖರಿಸಲ್ಪಟ್ಟಿವೆ.

ಉಳುವ ವಿಧಾನಗಳಿಗೂ ಹಾಗೆಯೇ. ಟ್ರಾಕ್ಟರುಗಳನ್ನು ಹೇಗೆ ಉಪ ಯೋಗಿಸಬೇಕು, ಏರೋಪ್ಲೇನಿನಿಂದ ಬೀಜ ಬಿತ್ತುವ ವಿಧಾನ, ಪೈರಿಗೆ ಕೊಳೆ ರೋಗ ಬರದಂತೆ ಹೇಗೆ ಔಷಧಿಗಳನ್ನು ತುಂತುರು ತುಂತುರಾಗಿ ಉಪಯೋಗಿಸ ಬೇಕು, ಹುಲ್ಲು ವಿಂಗಡಿಸುವ ಮಿಷನ್ನಿನ ಉಪಯೋಗ ಇತ್ಯಾದಿ ಇತ್ಯಾದಿ ಪುಸ್ತಕಗಳನ್ನೆಲ್ಲಾ ತರಿಸಿಟ್ಟಿದ್ದೇನೆ.

ನಿಮ್ಮಲ್ಲಿ ಅನಕ್ಷರಸ್ಥರು ಇರಬಹುದು (ಚಪ್ಪಾಳೆ) ಅವರಿಗೆ ಪ್ರಯೋಜನ ವಾಗಲಿ ಅಂತ ನಮ್ಮ ಗುಮಾಸ್ತನನ್ನು ಆ ಪುಸ್ತಕ ಭಂಡಾರಕ್ಕೆ ನೇಮಿಸಿದ್ದೇನೆ. ನೀವು ಹೋಗಿ ಆತನನ್ನು ಸಲಹೆ ಕೇಳಿದರೆ, ಆತ ಓದಿ ನಿಮಗೆ ಹೇಳಿಕೊಡು ತ್ತಾನೆ.

ದೊಡ್ಡ ಸಮಸ್ಯೆಗಳು ಏನಾದರೂ ಬಂದರೆ ನನ್ನಲ್ಲಿ ನೇರವಾಗಿ ಬನ್ನಿ" ಎಂದು ಅಮೋಘವಾದ ಭಾಷಣ ಮಾಡಿ, ಹಣೆಯ ಮೇಲಿನ ಬೆವರನ್ನು ಒರಸಿಕೊಂಡರು.

* * *

ಆಗಲೇ ನೋಡಿ ನಮ್ಮ ಮುದಿಲಿಂಗಯ್ಯ ಅಂದಿದ್ದು 'ಸಾಹೇಬ್ರಾ! ಎಷ್ಟು ರಾಗಿ ಮೂಟೆ ಹೆಚ್ಚಾಗಿ ಕೊಡಬೇಕು ಅಂತೀರಾ' ಅಂತ. ಅಮಲ್ದಾರರು ನೋಡಿದರು ಅವನ ಕಡೆ—

''ಹತ್ತು ಮೂಟೆ'' ಅಂತ ಅಧಿಕಾರಿವಾಣಿಯಿಂದ ಹೇಳಿದರು.

''ಮೂಟೇಗೇನು ಕೊಡ್ತಾಲರ್ಾ! ಕಛೇರೀಲಿ'' ಅಂದ.

''ಇಪ್ಪತ್ತೆರಡು ರೂಪಾಯಿ'' ಅಂದರು ಯಾರೋ.

''ಹಂಗಾದರೆ ಇಷ್ಟೆಲ್ಲಾ ಯಾಕೆ ಕಷ್ಟಪಡ್ತೀರಿ. ನಾನು ಹತ್ತು ಮೂಟೆ ರಾಗಿ ಹೆಚ್ಚಾಗಿ ಬೆಳೆದು ಕೊಡ್ತೀನಿ—ಆ ಪುಸ್ತಕ ಭಂಡಾರಾ ಅಂದ್ರಲ್ಲಾ ಅದನ್ನ ಮಾರಿ ನಮ್ಮ ಗ್ರಾಮಕ್ಕೆ ೫೦ ಕುರಿ ತರಿಸಿಕೊಡಿ" ಅಂದ. "ನೀನು ಹತ್ತು ಮೂಟೆ ರಾಗಿ ಹೆಚ್ಚಾಗಿ ಬೆಳೆ. ಈ ಗ್ರಾಮಕ್ಕೆ ನೂರು ಕುರಿ ತರಿಸಿ ಕೊಡುತ್ತೇನೆ" ಎಂದರು ಸಾಹೇಬರು

''ಹಂಗಾದರೆ ನಾಡಿದ್ದು ಹತ್ತು ಮೂಟೆ ರಾಗಿ ನಿಮ್ಮ ಕಛೇರಿಗೆ ಹೊಡಿಸು ತ್ತೇನೆ'' ಎಂದ ಲಿಂಗಯ್ಯ.

* * *

ಆಗಲೇ ಅಮಲ್ದಾರರು ವರ್ಗಮಾಡಿಸಿಕೊಳ್ಳುಕ್ಕೆ ಪ್ರಯತ್ನ ಮಾಡಿದ್ದು. ... ಆ ಫೋಟೋನ್ನೂ ಪತ್ರಿಕೆಗಳಲ್ಲಿ ಹಾಕಿಸಲೇ ಇಲ್ಲ.

— ಸೋಮೂ.

---

# ಸ್ವತಂತ್ರ ಗಾದೆಗಳು

ಅತಿ ಸ್ನೇಹ ನೀತಿ ಕೆಡಿಸಿತು
ಸವಿ ಕಂಡ ಸೆಟ್ಟರು ಸಕ್ಕರೆ ಬೆಲೆ ಏರಿಸದೆ ಇರುತ್ತಾರೆಯೇ ?
ಸರ್ವಗುಣ ಸಂಪನ್ನ, ಸಂಸಾರದವರಿಗೆಲ್ಲ ನೌಕರಿ
ಹೋಗಿ ಬಾ ಅಂದರೆ, ಹೋದವನು ಮತ್ತೆ ಬಂದೇ ಬಿಡೋದೆ ?
ಅಜ್ಜನಿಗೆ ಮೊಮ್ಮಗ ಬೊಜ್ಜು ಕಲಿಸಿದ
ಹೆಗ್ಗಣಕ್ಕೆ ತನ್ನ ಗುಣವೇ ಷಡ್ಗುಣ
ಹೋಟಲು ಹೊಕ್ಕರೆ ಹೊಟ್ಟೆನೋವು; ಜಟಕ ಹೊಕ್ಕರೆ ಬೆನ್ನುನೋವು
ಕೈ ಬೆಚ್ಚಗೆ ಮಾಡಿದರೆ ಕಂಟಕ ಪರಿಹಾರ
ನಿತ್ಯ ಕೂಗೋರನ್ನ, ಕೇಳೋರು ಯಾರು ?
ಮೂಕ ಪ್ರಾಣಿಗೆ, ಶೋಕದ ಚಾಕರಿ, ಭೀಕರ ಪ್ರಾಣಿಗೆ ಭಾರಿ ಚಾಕರಿ
ಬೆಳಗಾಗುತ್ತಲೂ ಗೊತ್ತಾಗಿ ಹೋಯಿತು; ಅಳಿಯ ಕುರುಡು ಅಂತ
ಸಾವಿರ ಸರ್ವೀಸ್‌ನ್ನ ಸಾಸುವೆ ಕಾಳಿನ ಲಂಚ ಕೆಡಿಸಿತು.
ಕೈಗೆ ಬಂದ ಮನೇಲಿ ಕೈಯ್ಯಿಂದ ಇರಿದದ್ದೇ ಲಾಭ
ಅಂಗೈ ಲಂಚಕ್ಕೆ, ಕನ್ನಡಿಗನೇನು, ಪಂಜಾಬಿಯೇನು ?
ತಕ್ಕಡಿಗೇನು ಗೊತ್ತು ಸಕ್ಕರೆ ಬೆಲೆ ?
ತಲೆಗೆಲ್ಲ ಒಂದೇ ತಂತ್ರ .. ಕೆಂಪುತಂತ್ರ, ಕೊಂಬ ತಂತ್ರ.

---

ಸ್ವಾತಂತ್ರ ದಿನಾಚರಣೆಯಂದು "ಮಹಾತ್ಮಾ" ಹರಿಕಥೆಯನ್ನು ಗಾಂಧೀ ಗುಡಿಯಲ್ಲಿ ಕೇಳಿದ ಮುದುಕಿಯೊಂದು ಸಹ ಮುದುಕಿಗಳಿಗೆ ಹೇಳಿತು "ಅಂತೂ ಅವನೇ ನಿಜವಾದ ಮಹಾತ್ಮಾನ್ರೀ. ಅಲ್ಲ, ಬಂದಿರೋ ಸ್ವಾತಂತ್ರ್ಯ ಕಳಕೋ ಬಾರದೂಂತಾ, ಯಾರ ಕೈಗೂ ಸಿಕ್ಕದೆ ತಣ್ಣಗೆ ಮೇಲಕ್ಕೆ ಹೊರಟ್ಹೋದಾ ಮಹರಾಯ, ಅಷ್ಟಾದ್ರೂ ಬಿಟ್ಟೆದಾರಾ ನೋಡಿ ನಮ್ಮ ಜನ ಅವನನ್ನು, ಗುಡೀಲಿ ಕಲ್ನಲ್ಲಿ ಕಟ್ಹಾಕಿದ್ದಾರಲ್ಲಾ" ಎಂದು ಸಂತಪಿಸಿದರಂತೆ.

# ಕೊರವನ ಸಿಂಹಾವಲೋಕನ !

ಡಾ|| ರೆಡ್ಡಿಯವರನ್ನು ಮೊದಲೇ ಪ್ರೋಚಾನ್ಸಲರ್ ಮಾಡಿದ್ದರೆ, ಅವರ ವರದಿಗೆ ಕೊಟ್ಟ ಹಣವನ್ನು ಮಿಗಿಸಿಕೊಳ್ಳಬಹುದಾಗಿತ್ತು ಅಲ್ಲವೇ! ಅಂತಂದ ನಮ್ಮ ಗಿಣಿ ಮೂಗಿನವ.

—ಮೆಲ್ಲಗೆ ಒಂದು ಚಿಟಿಕೆ ನಶ್ಯ ಏರಿಸುತ್ತಾ ಹೇಳಿದ ಕೊರವ "ಉಂಟೇ! ಉಂಟೆ! ಅದು ಬೀಜ ವೃಕ್ಷನ್ಯಾಯ! ಅವರ ವರದಿ ಇಲ್ಲದೆ ಇದ್ದಿದ್ದರೆ ಆ ಕೆಲಸವೇ ಇರುತ್ತಿರಲಿಲ್ಲ—ಆ ಕೆಲಸ ಇದ್ದಿದ್ದರೆ ವರದೀನೇ ಬೇಕಾಗುತ್ತಿರಲಿಲ್ಲ—ಇದೊಂದು ಸಮಸ್ಯೆ ಅಷ್ಟೆ!"

*　　*　　*

'ಮಾದರೀಗೆ ಅಂದರೆ ನಾವೇ' ಕಣಯ್ಯಾ! ಅಂದ ಕೊರವ, ಎಲೆಗೆ ಸುಣ್ಣ ಹಚ್ಚುತ್ತಾ. ಇವನು ಏನಾದರೂ ಹೇಳೋದು, ಹೀಗೆ ಹರಾತ್ತಾಗಿ, ಅರ್ಥವಾಗದ ಹಾಗೆ.

ಎಲ್ಲರೂ ಹುಬ್ಬು ಮೇಲಕ್ಕೆತ್ತಿದೆವು.

"ನಮ್ಮ ಬಡ್ಜೆಟ್ ಬಂದಾಗ ಸಿಕ್ಕುಸಿಕ್ಕಿದ ಹಾಗೆ ಏನೇನೋ ಟೀಕೆಗಳನ್ನು ಮಾಡಿದರು. ಈಗ ನೋಡಿ! ಕೇಂದ್ರ ಸರ್ಕಾರದಲ್ಲಿ ಮೊದಲಿದ್ದ ಮುನ್ನೂರು ಹತ್ತು ಕೋಟೀಲಿ, ಈ ಆಗಸ್ಟ್ ಹನ್ನೆರಡಕ್ಕೆ ಒಂದು ನೂರು ಕೋಟಿ ಬಾಕಿ ಇತ್ತು. ಈ ವರ್ಷ ಮುಗಿಯೋ ಹೊತ್ತಿಗೆ ನಮ್ಮ ಹಾಗೇ ಅವರೂ ಚಿಕ್ಕನಾಯ್ಕನ ಹಳ್ಳೀಗೆ ಹೋಗಬೇಕು ಭಿಕ್ಷಾಪಾತ್ರೆಗೆ – ನಮ್ಮ ಮಾದರೀನೇ" ಅಂದ.

*　　*　　*

"ಬೇಲೀನೆ ಎದ್ದು ಹೊಲ ಮೇದರೆ ಹೇಗಪ್ಪಾ ಜೀವನ ಮಾಡೋದು" ಅಂದ ಕೊರವ, ತನ್ನ ಶಾಲು ಸರಿಯಾಗಿ ಹೊದ್ದುಕೊಳ್ಳುತ್ತಾ.

"ಏಕಪ್ಪಾ ಅಂಥಾದ್ದೇನಾಯ್ತಪ್ಪ! ಈಗ" ಅಂದೆ ನಾನು, ಹಲ್ಲು ಸಂದಿಯಿಂದ ಅಡಿಕೆ ಚೂರು ನೂಕುತ್ತಾ.

ರೂಪಾಯಿನಿಂದ. ನಾವು ಬೇಕಾದ್ದು ಕೊಂಡು ಸುಖವಾಗಿರಬಹುದು ಅಂತ ಅಲ್ಲವೇ? ಆದರೆ ಅದೇ ನಮ್ಮ ಸುಖ ಜೀವನದ ಬೇಲಿಯಂತೆ ಅಲ್ಲವೆ, ನಮ್ಮ ಕಷ್ಟಗಳೆಲ್ಲಾ ಇವತ್ತು ಈ ರೂಪಾಯಿನಿಂದಲೇ ನೋಡು. ರೂಪಾಯಿಗೆ

ನಾಲ್ಕು ನೇರು ಅಕ್ಕಿ ಇದ್ದಿದ್ದು ಒಂದಾಯ್ತು. ಎರಡು ಸೇರು ಬೇಳೆ ಅಚ್ಚೇರು ಆಯ್ತು—ಈ ರೂಪಾಯನ್ನು ಸರಿಮಾಡಿದರೆ ಎಲ್ಲಾ ಸರಿಹೋಗುತ್ತೆ" ಅಂದ.

"ಅರೆ! ಈಗಿರೋ ರೂಪಾಯಿ ಏನಾಗಿದೆ ಸರಿಯಾಗಿರದೆ—ಅದೇನು ಖೋಟಾ ರೂಪಾಯೇ?" ಅಂದೆ.

"ಅಲ್ಲದೆ ಏನು. ಈಗಿನ ರೂಪಾಯಿನಲ್ಲಿ ಬೆಳ್ಳೀನೇ ಇಲ್ಲವಲ್ಲಾ! ಖೋಟಾ ಅಲ್ಲದೆ ಮತ್ತೇನು" ಅಂದ.

*　　　　*　　　　*

ರಾಷ್ಟ್ರಧ್ವಜದ ಕೆಳಗೆ ಎಂತಹವನಾದರೂ ತನ್ನ ಹುನಸ್ಸಿನಲ್ಲಿದ್ದುದನ್ನು ಹೇಳಿಯೇ ಬಿಡುತ್ತಾನೆ. ಅದು ಮಹಾತ್ಮರವರ ಪ್ರಸಾದ, 'ಸತ್ಯಮೇವ ಜಯತೆ' ಅಂದ ಕೊರವ, ಚಕ್ಕಲುಮುಟ್ಟಿಗೆ ಹಾಕುತ್ತಾ, ಕುರ್ಚಿ ಮೇಲೆ. "ಇದೇನು ಮಹಾ! ಎಲ್ಲರಿಗೂ ಗೊತ್ತು ಅಲ್ಲವೇ!" ಅಂದೆ.

''ಉಂಟೇ! ಮುಖಂಡರು ಮಾತನಾಡಿದ್ದೇ ಸತ್ಯ ಅಂತ ನೀವೆಲ್ಲಾ ತಿಳಿದುಕೊಳ್ಳುತ್ತೀರಿ—ಆದರೆ ರಾಷ್ಟ್ರಧ್ವಜದ ಕೆಳಗೆ ಅವರು ಸತ್ಯವನ್ನೇ ಮಾತ ನಾಡುತ್ತಾರೆ'' ಅಂದ.

ತಲೆ ಅಲ್ಲಾಡಿಸಿದ್ದೆ—ಅರ್ಥವಾಗಲಿಲ್ಲ ಅಂತ.

ಮೊನ್ನೆ ಸ್ವಾತಂತ್ರ ದಿನಾಚರಣೆ ಮಾಡಿದಾಗ, ಧ್ವಜಾರೋಹಣವಾದಾಗ ಮುಖಂಡರೊಬ್ಬರು ಹೇಳಿದ್ದು ಜ್ಞಾಪಕ ಇದೆಯೇ? 'ಅಪರಿಮಿತ ತ್ಯಾಗ ಮಾಡಿದವರು ಈಗ ಸ್ವಾತಂತ್ರ್ಯ ಬಂದಾಗ ಏನಾದರೂ ಇದ್ದುದನ್ನು ಗಿಟ್ಟಿಸಿ ಕೊಂಡರೆ ಹೊಟ್ಟೆಕಿಚ್ಚು ಪಡಬಾರದು' ಅಂತ—ಅದಕ್ಕೇ ಹೇಳಿದ್ದು ಮಹಾತ್ಮರ ಆತ್ಮ ರಾಷ್ಟ್ರ ಧ್ವಜವನ್ನು ಕಾಯುತ್ತೆ—"ಸತ್ಯಮೇವ ಜಯತೆ"

*　　　　*　　　　*

''ಇನ್ನು ಮೇಲೆ ನಮ್ಮ ದೇಶದಲ್ಲಿ ಶಾಂತಿ ಸುಖ ಖಂಡಿತ. ನಮ್ಮ ಸಮಸ್ಯೆಗಳೆಲ್ಲಾ ಹೆಚ್ಚು ಕಡಿಮೆ ನಿವಾರಣೆಯಾದಂತೆಯೇ'' ಅಂದ ಕೊರವ ಬರುತ್ತಿದ್ದ ಹಾಗೆಯೇ.

''ಯಾಕೆ'' ಅಂದೆ.

ಕೈಲಿದ್ದ ಪತ್ರಿಕೆ ತೋರಿಸುತ್ತಾ ಹೇಳಿದ ''ಇನ್ನೊಂದು ಮೂರು ನಾಲ್ಕು ಜನ ಮುಖಂಡರಿಗೆ ಒಂದೊಂದು ಮಾರ್ಗ ತೋರಿಸಿದರೆ ಆ ಮೇಲೆ ಎಲ್ಲರೂ

ಅಧಿಕಾರ ವ್ಯಾಮೋಹ ತ್ಯಜಿಸಬಹುದು—ದೇಶದಲ್ಲಿ ಶಾಂತಿ ತಲೆದೋರುತ್ತೆ.'' ಅಂದ.

ಅರ್ಥವಾಗಲಿಲ್ಲ ಎಂದು ಹೇಳಿಯೇ ಬಿಟ್ಟೆ.

—''ಅರ್ಥವಾಗದೇ ಇದ್ದರೆ ಬಿಡು—ಅನರ್ಥವೇನೂ ಇಲ್ಲ'' ಅಂದ.

* * *

''ಕೇಳಿದೆಯಾ! ಕೊರವ, ದೆಹಲಿಯಲ್ಲಿ ಬಸ್ ಕೆಲಸಗಾರರೆಲ್ಲಾ ಸಂಪು ಹೂಡಿದ್ದಾರಂತೆ. ಅಲ್ಲಿ ಜನರ ಓಡಾಟಕ್ಕೆ ತುಂಬಾ ತೊಂದರೆಯಂತೆ'' ಅಂದೆ, ಕೊರವ ಗಿರ್‌ಗಿರ್ ಶಬ್ದ ತನ್ನ ಚಪ್ಪಲಿ ಕೈಲಿ ಮಾಡಿಸುತ್ತಾ ಬಂದಾಗ.

''ಆಹಾ! ಓದಿದೆ ಪತ್ರಿಕೆಗಳಲ್ಲಿ. ಇದಕ್ಕೆಲ್ಲಾ ಒಂದೇ ಮದ್ದು—ರಾಷ್ಟ್ರೀಕರಣ'' ಅಂದ.

''ಒಂದೊಂದೇ ರಾಷ್ಟ್ರೀಕರಣ ಮಾಡಿದರೆ ಹೇಗಯ್ಯಾ'' ಅಂದೆ.

''ಒಂದೊಂದು ಮಾಡಲೇಬಾರದು. ಹೋಟಲುಗಳು, ವೈದ್ಯರುಗಳು, ಕಾರ್ಖಾನೆಗಳು ಎಲ್ಲವನ್ನೂ ಒಟ್ಟಿಗೆ ರಾಷ್ಟ್ರೀಕರಣ ಮಾಡಿಬಿಟ್ಟು, ಆ ಮೇಲೆ—ಒಬ್ಬ ಮಂತ್ರಿಯ ಹತೋಟಿಗೆ ಪೂರ್ಣ ಬಿಟ್ಟುಬಿಡಬೇಕು''—ಅಂದ.

* * *

———o———




ಬೋರ್ಡ್ ತಮ್ಮಯ್ಯ ಬದುಕ್ಕೊಂಡ.

# ಒಂದು ಸಲಹೆ

"ಅರ್ಥ ಮಾಡಿಕೊಳ್ಳದೆ ಉರು ಹೊಡೀಬೇಡ್ರೋ" ಅಂತ ನಮ್ಮ ಮೇಸ್ಟರು ನನಗೆ ಹೇಳುತ್ತಲೇ ಇದ್ದರು. ಆದರೆ ನಾನು ಡಿಗ್ರಿ ತೆಗೆದುಕೊಂಡು ಓದು ಮುಗಿಸಿದ ತನಕ ನಾನೇನೂ ಅದನ್ನ ಮನಸ್ಸಿಗೆ ತಂದುಕೊಳ್ಳಲಿಲ್ಲ ಅನ್ನಿ! ಅದು ನನಗೆ ಮೊನ್ನೆ ಮೊನ್ನೆ ನಿಜ ಎಂದೆನಿಸಿತು. ಅದು ನನ್ನ ಮನಸ್ಸಿಗೆ ತೋಚಿದ್ದೇ ಒಂದು ತರಹ.—

ನನಗೆ ಬಸವನಗುಡಿಯಲ್ಲಿ ಮನೆ ಬಾಡಿಗೆಗೆ ಸಿಕ್ಕಿದ ಸಮಾಚಾರವನ್ನು ನಾನು ಮಾವನಿಗೆ ಟೆಲಿಗ್ರಾಂ ಮಾಡಿದೆ. ಆತ ಅದನ್ನೇ ಕಾಯುತ್ತಿದ್ದನೆಂದು ಕಾಣುತ್ತೆ! ಅವಳ ಕೈಲಿ ಆಗಲೇ ಹಾಸಿಗೆಯನ್ನ ಕಟ್ಟಿಡಿಸಿದ್ದನೆಂದು ಕಾಣುತ್ತೆ! ಮಾವ, ಮಗಳು ಇಬ್ಬರೂ ಅವತ್ತಿನ ಸಂಜೆಯ ರೈಲಿನಲ್ಲೇ ಬಂದಿಳಿದರು! ಮತ್ತೆ ನಾನು ಗೃಹಸ್ಥನಾದೆ!

ನಮ್ಮ ಮನೆಗೂ ಕಾಂಪೌಂಡಿದೆ. ಅಲ್ಲಿ ರಂಗು ರಂಗಿನ ಹೂಗಿಡಗಳನ್ನ ಬೆಳಸಿ ಮನೆಗೆ ಅಲಂಕಾರ ಮಾಡಬೇಕೆಂತ ಮನೆಯ ಯಜಮಾನಿಯಾದ ಅವಳು ನನ್ನೊಂದಿಗೆ ಕುಸುಮಾಲೋಚನೆಗೆ ಪ್ರಾರಂಭಿಸಿದಳು. ಮಲ್ಲಿಗೆ ಬಳ್ಳಿ ಹಬ್ಬಿಸಬೇಕು ಸಂಪಿಗೆ ಸಸಿ ಹಾಕಬೇಕು. ಗುಲಾಬಿ ಕಡ್ಡಿ ನೆಡಬೇಕು ಅಂತ ಅವಳು ಗುಲಾಬಿ ಹೂವಿನಷ್ಟು ಮೃದುವಾಗಿ ಮಾತಾಡಿದಳು. "ತಂಪಿಗೆ ಹಾಲು, ಮೊಸರು ಇಲ್ಲದಿದ್ದ ಮೇಲೆ ತಲೆಗೆ ಸಂಪಿಗೆ ಕಂಪೇಕೆ? ಹೆರಳಿಗೆ ಮಲ್ಲಿಗೆ ಹೇರಿಕೊಂಡರೆ ಮಲ್ಲಿಗೆ ಹೂವಿನಂಥ ಅನ್ನ ತಿಂದಂತಾಗುತ್ಯೆ? ಇವತ್ತೆಲ್ಲ ಅಲ್ಲಿರು ವುದು ಎರಡೂಕಾಲಡಿ ಭೂಮಿ. ಲಕ್ಷಣವಾಗಿ ಬೂದುಕುಂಬಳ ಹಾಕಬಾರದೆ! ಮಧ್ಯೆ ಮಧ್ಯೆ ಒಂದೊಂದು ದಿವಸ ಹೊಟ್ಟೆತುಂಬಿಸಿಕೊಳ್ಳಬಹುದು" ಎಂದ ನನ್ನ ಮಾವ.

ನನಗೆ ಇದು ತುಂಬಾ ಯೋಚನೆಗಿಟ್ಟುಕೊಂಡಿತು. ಮೂರು ದಿವಸ ಮನೆಗೆ ಹೋಗದೆ ಮಃನಾಲೆಯಲ್ಲೇ ಇದ್ದು (ಆಗ ಇನ್ನೂ ಮಸಾಲೆ ಸಿಕ್ಕುತ್ತಿತ್ತು) ಮೂರನೆ ದಿವಸ ರಾತ್ರಿ ಜೇಬಿನಲ್ಲಿ ಹತ್ತು, ಹದಿನೈದು ಹೊಗೆಸೊಪ್ಪಿನ ಸೊಸಿ ಗಳನ್ನ ತುರಕಿಕೊಂಡು ಮನೆಗೆ ಬಂದೆ. ಬೆಳಗ್ಗೆ ಎಲ್ಲರೂ ಏಳುವುದಕ್ಕೆ ಮುಂಚೆಯೇ ಎದ್ದು ಮನೆಯ ಮುಂದುಗಡೆ ಆ ಸೊಸಿಗಳನ್ನ ನೆಟ್ಟು ನೀರು ಹಾಕಿದೆ. ಅವಳು ಎದ್ದು ಗುರುಗುಟ್ಟಿಕೊಂಡು ನೋಡಿ 'ಅವಲಕ್ಷಣ' ಅಂದಳು. ಮಾವ ಕನ್ನಡಕ ಹಾಕಿಕೊಂಡು ಪರೀಕ್ಷಿಸಿದ. ಶುದ್ಧ ಹುಚ್ಚ ಎಂದ!

ಈಗ ನೋಡಿ, ಅರ್ಥಮಾಡಿಕೊಳ್ಳದೆ ಉರು ಹೊಡಿಬಾರದು ಅನ್ನುವ ಮಾತು ಮನೆಗಳ ಮುಂದೆ ಅಲಂಕಾರಮಾಡುವುದಕ್ಕೂ ಹೇಗೆ ಅನ್ವಯಿಸುತ್ತೆ.

ಅಲಂಕಾರಕ್ಕೆ ಒಂದು ಅರ್ಥ ಸೂಚಿತವಾದ ಹಿನ್ನಲೆ ಇರಬೇಕು. ಅಂದರೆ ಅರ್ಥವಿಲ್ಲದೆ, ಅಲಂಕಾರಕ್ಕೆಂದು ಮನೆಗಳ ಮುಂದೆ ಯಾವ ಯಾವದೋ ಗಿಡ ಗಳನ್ನ ಬೆಳೆಸಬಾರದು ಅಂತ ನಾನು ಹೇಳೋದು!

ನಾನು ಹೊಗೆಸೊಪ್ಪಿನ ಕಾರ್ಖಾನೆಯಲ್ಲಿ ಟೊಬ್ಯಾಕೋ ಇನ್ಸ್‌ಪೆಕ್ಟರು. ಬೆಳಗಾದರೆ ನಾನು ನೋಡುವುದು ಹೊಗೆಸೊಪ್ಪು! ಕೇಳುವುದು ಹೊಗೆಸೊಪ್ಪಿನ ವಿಷಯ. ರುಚಿ ನೋಡುವುದೂ ಹೊಗೇಸೊಪ್ಪೇ! ಹೀಗಿರುವುದರಿಂದ ನನ್ನ ಮನೆ ಮುಂದೆ ಯಾವ ಯಾವುದೋ ಗಿಡಗಳನ್ನು ಬೆಳಸುವುದಕ್ಕಿಂತ ಹೊಗೆ ಸೊಪ್ಪಿನ ಗಿಡಗಳನ್ನ ಬೆಳಸುವುದರಲ್ಲಿ ಹೆಚ್ಚು ಅರ್ಥವಿಲ್ಲವೆ? ಇದನ್ನೇ ನಾನು ಅರ್ಥ ಸೂಚಿತವಾದ ಅಲಂಕಾರ ಅಂತ ಅನ್ನುವುದು. ಈಗ ನಾನು ಹೊಗೆ ಸೊಪ್ಪಿನ ಗಿಡಗಳನ್ನ ಹಾಕಿದಂತೆಯೇ ಸರ್ವೆ ಆಫೀಸಿನವರು ತಮ್ಮ ತಮ್ಮ ಮನೆ ಗಳ ಮುಂದೆ ಸರ್ವೆ ಗಿಡಗಳನ್ನ ಹಾಕಲಿ. ಸಿಲ್ಕ್ ಫಿಲೇಚರ್ಸ್‌ನಲ್ಲಿರುವವರು ಉಪ್ಪುನೇರಳೆಕಡ್ಡಿಗಳನ್ನು ಬೆಳಸಲಿ. ಮೇಸ್ತ್ರುಗಳು ಮೆಣಸಿಗೆ ಹಾಕಲಿ, ಗುಮಾಸ್ತರು ಗೋರಿಕಾಯಿ ಗಿಡಹಾಕಲಿ, ಸಕ್ಕರೆ ಕಂಪೆನಿಯಲ್ಲಿ ಕೆಲಸವಿರುವ ವರು ಅವರ ಮನೆಯ ಎಡಗಡೆ ಒಂದು, ಬಲಗಡೆ ಒಂದು ಕಬ್ಬಿನ ಜಲ್ಲೆ ಬೆಳಸಿ ಅವೆರಡರ ತೊಂಡೆಗಳನ್ನೂ ಬಗ್ಗಿಸಿ ಗಂಟುಹಾಕಿ ಗೇಟ್‌ಮಾಡಲಿ! ಕಾಫಿಸ್ಟರು ಕಾಫಿಗಿಡಗಳನ್ನ ಹಾಕಲಿ, ಕೋರ್ಟಿನವರು ಕೋಕೋ ಬೆಳೆಸಲಿ, ಆಯುರ್ವೇದ ಪಂಡಿತರಾದರೆ ಅಳಲೆಕಾಯಿಗಿಡ ಹಾಕಲಿ, ಅಮುಲ್ದಾರ್ ಆದರೆ ಅಶ್ವತ್ಥವೃಕ್ಷ ಹಾಕಲಿ! ಅವರನ್ನು ನೋಡುವುದಕ್ಕೆಂದು ಬಂದವರು ಅವರ ದರ್ಶನ ಸಿಗುವ ತನಕ ಹಾಯಾಗಿ ಅಶ್ವತ್ಥ ಪ್ರದಕ್ಷಿಣೆ ಮಾಡುತ್ತಿರಬಹುದು! ಅಮಿಾನರಾದರೆ ಅಂಟುವಾಳ ಹಾಕಲಿ....ಇತ್ಯಾದಿ ಹೀಗೆಯೇ ಒಬ್ಬರಿಗೆ ಒಂದೊಂದು ತರಹ!

ಹೀಗೆ ಮಾಡಿದ್ದೇ ಆದರೆ ನಾವು ಬೀದಿಯಲ್ಲಿ ಒಂದು ಸಲ ಸುಳಿದಾಡಿ ಬಂದರೆ ಸಾಕು, ಯಾರು ಯಾರಿಗೆ ಏನು ಏನು ಕೆಲಸಗಳಿವೆ ಎಂಬುದನ್ನ ಪತ್ತೆ ಹಚ್ಚಿಬಿಡಬಹುದು! ಸಾರ್ವಜನಿಕರಿಗೆ ಎಷ್ಟೋ ಉಪಕಾರ ಮಾಡಿದಂತಾಗುತ್ತೆ. ಈಗ ಪರಸ್ಥಳದವರು ಯಾರಾದರೂ ಒಬ್ಬರು ಬಂದು "...ರಾಯರ ಮನೆ ಇಲ್ಲಿ ಎಲ್ಲೋ ಇದೆಯಂತಲ್ಲ, ಆ ಮನೆ ಯಾವುದು ಸ್ವಾಮಿ?" ಎಂದು ನಿಮ್ಮನ್ನು ಕೇಳಿದರು ಅಂತ ಇಟ್ಟುಕೊಳ್ಳಿ! ಆಗ ನೀವು "ಓ, ಸರ್ವೇಯರ್ ರಂಗರಾಯರ ಮನೆಯೆ, ಹೀಗೇ ನೆಟ್ಟಗೆ ಹೋಗಿ ಆ ಮೂಲೆಯಲ್ಲಿ ತಿರಿಗಿಕೊಳ್ಳಿ. ಮನೆಯ ಮುಂದೆ ನಾಲ್ಕೈದು ಸರ್ವೆ ಮರಗಳಿವೆ. ಅದೇ ಮನೆ, ಹೋಗಿ" ಎಂದು ಹೇಳಬಹುದು. ಹೇಳುವವರಿಗೂ ಸುಲಭ. ಹುಡುಕುವವರಿಗೂ ಸುಲಭ.

—ಹಾ. ರಾ

———o———

# " ವಟಸಾವಿತ್ರಿ ಹುಣ್ಣುಮೆ "

"ಬನ್ನಿ.. .ಬನ್ನಿ ಮೀನಾಕ್ಷಮ್ಮನೋರೆ....ಮೇಲೆ ಬನ್ನಿ ಚಾಪೆ ಮೇಲೆ...."

"ಪರವಾಗಿಲ್ಲಾಂತಂದ್ರೆ... ಹೊಸದೇನು ಸೀರೆ...."

"ಇಲ್ಲಮ್ಮಾ. . ಆಗಲೆ ಶಾನೆ ದಿನವಾಯ್ತು ತೆಗೆದು....ಇವರು ಮೊಳಕಾಲ್ಮೂರಲ್ಲಿದ್ದಾಗ ಹೇಳಿ ನೆಯಿಸಿದ್ದು...."

"ಹೊಸಾದಿದ್ದಾಗಿದೆ ನೋಡಿ....ಜಾಸ್ತಿ ಉಟ್ಟಹಾಗಿಲ್ಲ....ಅಪರೂಪಕ್ಕೆ ಹೊರಗೆ ತೆಗಿತೀರೀಂತ ಕಾಣುತ್ತೆ...."

"ಹೌದು....ಭೀಮನ ಅಮಾವಾಸ್ಯೆ.....ಶ್ರೀರಾಮನವಮಿ.....ವಟಸಾವಿತ್ರಿ ಹುಣ್ಣುಮೆ....ಇಂಥಾ ವ್ರತಗಳಲ್ಲೀ ಈ ಸೀರೆ, ಚೈನು ಬಳೆ...ಎಲ್ಲಾ ಉಪಯೋಗ....ಸುಮ್ಮನೆ ದಿನಾ ಬಳಿಗೆಕೆ ಯಾಕೆ ಉಪಯೋಗಿಸಬೇಕ್ಹೇಳಿ....ಅಂ...."

"ಸರಿಸರಿಯೆ ಪಾಪ....ಪ್ರತಿನಿತ್ಯ ಯಾಕೆ ಪಟ್ಟಾವಳಿ ಪೀತಾಂಬರ.... ಅದೇನೋ ಹೇಳ್ತಾಗೆ....ಹ ಹ...."

"....ಕೊಳ್ಳಿ....ಅಡಕೆಲೆ .. ಬಾಗಿನ...."

"ಇದೇನು ಸಾವಿತ್ರಮ್ಮನೋರೆ....ಗೌರಿ ಕಡೆ ದಿನ ಕೂಡ ನಾವಿಷ್ಟು ಬಾಗಿನ. . ಪ್ರಸಾದ ಅದ್ಧೂರಿಯಾಗಿ ಮಾಡೊಲ್ಲ....ಕೇವಲ ವಟಸಾವಿತ್ರಿ ಹುಣ್ಣಿಮೆಗೆ ಇಷ್ಟು ಸಂಭ್ರಮವೆ?...."

"ಮಹಾ ಪವಿತ್ರ ವ್ರತವಲ್ಲವೆ ಮೀನಾಕ್ಷಮ್ಮನೋರೆ ಇದು....ನನ್ನ ಮಟ್ಟಿಗಂತೂ ಈ ವ್ರತ ಮಹಾ ಪೂಜ್ಯ...."

"ಅದೇನು?... ....ನೀವು ಎಲ್ಲಾ ಹಬ್ಬ ಹರಿದಿನಗಳಲ್ಲೂ ಹೀಗೆಂತಲೇ ತೋರುತ್ತೆ . ."

"ಇಲ್ಲವಮ್ಮಾ ಎಲ್ಲಾ ಹೀಗೆ ಮಾಡೋ ಕಾಲವೆ ಇದು?....ಏನೋ ಈ ಸಾವಿತ್ರಿಗೆ....ಈ ಹುಣ್ಣಿಮೆ ಸತ್ಯವಾನನ ಸಾವಿತ್ರಿಯ ಹುಣ್ಣಿಮೆಯಷ್ಟೇ ಶ್ರೇಷ್ಟವಾದದ್ದು...."

"ಅಂದರೆ?....ಅರ್ಥವಾಗಲಿಲ್ಲ"

"...ಅಂದ್ರೆ ..ಒಲಿದ ಗಂಡ... ಯಮಧರ್ಮ—ಸತ್ಯವಾನ ಪಿಲ್ಲಾಯು ವಿಧಿನಿಯಮ—ಹೊಡೆದಾಟ– ಗೆದ್ದ ಮುತ್ತೈದೆ ಅರ್ಥವೆ? "

"....ಬಿಡಿಸಿ ಹೇಳಿ ಸಾವಿತ್ರಮ್ಮನೋರೆ"

"ಶಾನೆ ದೊಡ್ಡ ಚರಿತ್ರೆ ಕಣ್ರಿ...."

"ಅವರು ಮನೆಲಿಲ್ಲ ..ಕ್ಲಬ್ಬಿಗೆ ಹೋಗಿದ್ದಾರೆ ಬರೋದು ಒಂಭತ್ತೋ ಹತ್ತೊ ಗಂಟೆಗೆ...ಅಡಿಗೆ ಮಾಡಿ ಬಂದಿದೀನಿ ಇನ್ನೇನು ಅವಸರ? ಇಷ್ಟರ ಮೇಲೆ ಬಂದರೆ ಬಡಿಸಿಕೊಂಡು ಉಂಡು ಮಲಗುತ್ತಾರೆ—ಹೇಳೀಂದ್ರೆ ಕೇಳೋಣ ..."

"ಯಾರಮುಂದೂ ಹೇಳಿಲ್ಲ ...ಹೇಳಿಕೊಂಡರೆ ಮನಸ್ಸೂ ನೆಮ್ಮದಿಯಾಗುತ್ತೇಂತ ಕೇಳಿದ್ದೇನೆ ...ಕೇಳಿ. ಮೀನಾಕ್ಷಮ್ಮನೋರೆ .. ಹೇಳ್ತೀನೆ. ಆ ಮಹಾ ತಾಯಿ ಸಾವಿತ್ರಿದೇವಿ ಪುಣ್ಯ ನಾವಿಷ್ಟರಮಟ್ಟಿಗೆ ಸಂಸಾರ ಮಾಡ್ಕೊಂಡಿದ್ದೇವೆ ....ನಮ್ಮ ತಂದೆಗೆ ಒಬ್ಬಳೇ ಮಗಳು ಗಂಡೂ ನಾನೆ ಹೆಣ್ಣೂ ನಾನೆ ಅಚ್ಚಿ ಮೆಚ್ಚಿನಿಂದ ಸಾಕಿದರು—ನಾ ಹುಟ್ಟಿದ್ದು ತಂದೆಯವರು ೧೮ ವರ್ಷ ದೇವಿಯನ್ನ ಕುರಿತು ಪೂಜೆಮಾಡಿ ಹರಕೆಹೊತ್ತದ್ದರಿಂದ. ನನ್ನ ಜನನ ಹುಣ್ಣಿಮೆ ದಿನ ಅದಕ್ಕೆ ಸಾವಿತ್ರಿ ಅಂತಲೇ ನಾಮಕರಣಮಾಡಿದರು...ಅವರ ಪ್ರೀತಿ ನನ್ನ ಈ ವೈಗೆ ಕಾರಣವಾಯಿತು— ಬೇಡಿದ್ದು ಬಡಿಸಿದರು. ಕಾಡಿದ್ದು ಕೊಡಿಸಿದರು. ಕೋಡುಬಳೆಂದ್ರೆ ಜಹಂಗೀರು, ಕಾಫಿ ಎಂದರೆ ಕೆನೆಹಾಲು, ಮಜ್ಜಿಗೆ ಎಂದರೆ ಹಾಲುಖೀರುಕೊಟ್ಟು ಕಾಪಾಡಿದರು. ಪಟ್ಟಾವಳಿ ಪರಕಾರ ಕೇದಿಗೆ ಜಡೆ, ರಾಗಟೆ ಬಿಲ್ಲೆ ಹಾಕಿ ಮೆರೆಸಿದರು. ಹಾಯಾಗಿ ಕಷ್ಟಾನ್ನೊದನ್ನ ತಿಳೀದೆ ಬೆಳೆದು ಮದುವೆಯ ವಯಸ್ಸಿನ ಹೆಣ್ಣಾಗಿ ರಾರಾಜಿಸಿದೆ.. ."

"ಹೂಂ .. ಪುಣ್ಯವಂತರಮ್ಮ...."

" ಪುಣ್ಯವೋ ಪಾಪವೋ... ಅಂತೂ ಧಡೂತಿಯಾಗಿ ಬೆಳೆದೆ. ತಂದೆಯವರು ನನ್ನ ಪತಿದೇವನಿಗಾಗಿ ಹುಡುಕತೊಡಗಿದರು. ತಂದೆಯವರು ಜಮೀನುದಾರ್ರು—ಅವರ ಅಂತಸ್ತಿನ ವರನನ್ನೇ ಹುಡುಕಿ ಅನೇಕ ಫೋಟೋಗಳ ಸಂಗ್ರಾಹ ಮಾಡಿದರು. ಅಶ್ವಪತಿರಾಯರ ಮಗಳಿಗೆ ತಾಮುಂದು ನಾ ಮುಂದೆಂದು ಹುಡುಗರ ಪಿತೃಗಳು ಜಾತಕ ಹಿಡಿದು ಪರದಾಡತೊಡಗಿದರು.. "

"ಅಶ್ವಪತಿರಾಯರು!!! .."

" ಅವರೇ ನಮ್ಮ ತಂದೆ ಕುದುರೆ ಜೂಜಿನಲ್ಲಿ ಮಹಾ ಮೋಹ ಅವರಿಗೆ ... ಇಪ್ಪತ್ತು ಜಟಕಾ ಇಟ್ಟು ಸಾಬಿಗಳಿಂದ ಹೊಡೆಸುತ್ತಿದ್ದರು—ಜೂಜಿನ ತೇಜಿ ಯೊಂದನ್ನೂ ಇಟ್ಟಿದ್ದರು. ಅದರ ದೆಸೆಯಿಂದಾಗಿ ಅಶ್ವಪತಿರಾಯರೆಂದೇ ಅವರನ್ನು ಜನ ಕರೆಯುತ್ತಿದ್ದರು "

"ಹಾಗೋ... ಸರಿಸರಿ '

"ನನಗೆ ತಕ್ಕ ಗಂಡು ಆ ಜಾತಕರಾಸಿಯಲ್ಲಿ ಸಿಕ್ಕಲಿಲ್ಲ.. ಯಾವ ಫೋಟೊ ತೋರಿಸಿದರೂ ನನ್ನ ಮನಸ್ಸಿಗೆ ಒಪ್ಪಲಿಲ್ಲ.. ಸುಳ್ಳು ಹೇಳಿದರೂ ಕೇಳ್ತೀರ, ನಿಜ ಹೇಳಿದರೂ ಕೇಳ್ತೀರ—ಮೀನಾಕ್ಷಮ್ಮನೋರೆ... ನನಗೆ ನಮ್ಮನೆ ಎಮ್ಮೆ ಕರು ಮೇಲೆ ಮಹಾ ಮಮತೆ—ಒಂದು ದಿನ ಅದೆಲ್ಲೊ ಮನೆಮುಂದೆ ಮೇಯು ತ್ತಿದ್ದುದು ಮಾಯವಾಯಿತು ನಾನೂ ನನ್ನ ಸಖಿ....ಪಕ್ಕದ ಮನೆ ಪದ್ಮಾವತಿ ಅದನ್ನರಿಸಿ ಹೊರಟೆವು—ಆಳುಕಾಳುಗಳೂ ಹುಡುಕತೊಡಗಿದರು—ಹುಡು ಕುತ್ತಾ ಹುಡುಕುತ್ತಾ ಆ ಮಂಗಳವಾರ ಮುಂಜಾನೆ ಪಕ್ಕದ ಹಳ್ಳಿಯವರೆಗೂ ಒಂದೆ... ಅಲ್ಲೊಂದು ಗುಡಿಸಲ ಬಳಿ ನಮ್ಮ ಕರು ಕಟ್ಟಿಹಾಕಿದ್ದರು .. "

"ಕಳ್ಳರು—ಕದೀಮರು"

"ಶಾಂತಂ ಪಾಪಂ ಹಾಗೆನ್ನಬೇಡಿ.. ಅದಾಗಿ ಬಂದಿದ್ದನ್ನ ಮಾಲೀಕರು ಒಂದೊಯ್ಯಲೆಂದು ಕಟ್ಟಿಹಾಕಿದ್ದರು ಆ ಪುಣ್ಯಾತ್ಮರು. ಒಳಗೆ ಕಣ್ಣು ಕಾಣದ ಮುದುಕ ಮುದುಕಿ ಅವರ ಕಾಲೊತ್ತುತ್ತ ಒಬ್ಬ ಸುಂದರ ಯುವಕ ಕುಳಿತಿದ್ದ ....ನಮ್ಮನ್ನು ಕಂಡೊಡನೆ ಹೊರಕ್ಕೆ ಬಂದು .. ಗುರುತು ಹೇಳಿ ಕರು ಒಯ್ಯ ಬಹುದೆಂದು ತನ್ನ ಸಂಗೀತದಂತಹ ಧ್ವನಿಯಲ್ಲಿ ಹೇಳಿದರು...."

"....ಪುರಾಣದ ಸತ್ಯವಾನರಂತಹ ವ್ಯಕ್ತಿ ಅಲ್ಲವೆ?...."

"....ಸರಿಯಾಗಿ ಊಹಿಸಿದಿರಿ ಮೀನಾಕ್ಷಮ್ಮನೋರೆ....ಆ ಕಣ್ಣು ನನ್ನ ಸೆರೆ ಹಿಡಿದವು....ಬಾಲದ ತುದಿ ಬೆಳ್ಳಗೆ... ಪೊಳ್ಳಗಣ್ಣು ಎಂದು ಹೇಳುತ್ತಲೇ ಕರುವಿನ ಕುಣಿಕೆ ಬಿಚ್ಚಿ ನನ್ನ ಕೈಗಿತ್ತರು....ಆದರೆ ನಾಲ್ಕು ಕಣ್ಣು ಗೌರಿ.... ಮನಸ್ಸಿನಲ್ಲಿ ಅಲ್ಲೋಲಕಲ್ಲೋಲವಾಯಿತು... ತಿರುಗಿ ತಿರುಗಿ ನೋಡಿ ಮನೆ ಸೇರಿದೆ—ಪದ್ಮಾವತಿ ಪೀಡಿಸಿ ಪೀಡಿಸಿ ನನ್ನ ಹಿಯ್ಯಾಳಿಸಿ ಅಮ್ಮನೊಡನೆ ನಡೆದ ಸಂಗತಿ ಹೇಳಿಬಿಟ್ಟಳು....."

"ಆಮೇಲೆ ? "

"ಅ ಮೇಲೇನು ಅಮ್ಮನಿಂದ ತಂದೆಯುವರಿಗೆ ಮುಟ್ಟಿತು. ಕುಲ ಪುರೋ ಹಿತರಾದ ನಾರದ ಮುನಿಗಳನ್ನು ಬರಹೇಳಿದರು...."

"ನಾರದ ಮುನಿಗಳು?... "

"ಅಲ್ಲ ನಾರಾಣಾಚಾರ್ರ್ರು. ಆದರೆ ಅಲ್ಲಿಂದಿಲ್ಲಿಗೆ ಸುದ್ದಿ—ಸುಳ್ಳು ತಟವಟಮಾಡಿ ಜಗಳ ತಂದಿಡುವುದರಲ್ಲಿ ಆತ ನಾರದನೇ ಮನೆಯಲ್ಲಿನ ಮಂಗಳ ಕಾರ್ಯಗಳಿಗೆ.. ಮದುವೆ ಮುಂತಾದ ದಕ್ಷಿಣೆ ಬಾಬತ್ತಿನ ವಿಷಯಗಳನ್ನು ಕಾಯುವ ಜಾತಕ ಪಕ್ಷಿ ಆ ವ್ಯಕ್ತಿ.. .ಸುತ್ತಮುತ್ತಲಿನ ಹಳ್ಳಿಯ ಹತ್ತೂ ಸಮಸ್ತರ ತಾತ ಮುತ್ತಾತಂದಿರ ಕುಲಗೋತ್ರ ಬಲ್ಲ ಮಹಾ ನಿಘಂಟು ಆ ಘಟ... ಬಂದವರೇ ನನ್ನ ಮೆಚ್ಚಿನ ಸತ್ಯವಾನನ ವಿಷಯ ಕೇಳಿ ಕಣ್ಣಲ್ಲಿ ನೀರು ತಂದು ನನ್ನ ಕುಂಕುಮ ಆಳವಾಗಿ ನೋಡಿದರು. ತಂದೆಯವರು ಕಾತುರತೆಯಿಂದ "ಏನು ವಿಷಯ" ಎಂದರು. ಅವರು "ಏನು ಹೇಳಲಿ, ಗುಣ ಅಪರಂಜಿ ಆದರೆ ತಾಳಿ ಭದ್ರವಿಲ್ಲ—ಕಟ್ಟಲು ತ್ರಾಣವಿಲ್ಲದ ನಿತ್ರಾಣಿ" ಎಂದು ನಿರಾಶೆ ಮೂಡಿಸಿದರು. ಅಸಿಸ್ಟೆಂಟು ಕಮಿಷನರಿಂದ ಹಿಡಿದು ಅಮಲ್ದಾರ್ರು ಅಕೌಂಟೆಂಟುಗಳವರೆಗಿನ ಸಮಸ್ತ ಜಾತಕಗಳನ್ನು ಧಿಕ್ಕರಿಸಿ ಶಾನುಭೋಗಗಿರಿ ಕಳೆದುಕೊಂಡ ಕುರುಡ ಕಪೋತಿ ಮಗ ಕೇವಲ ಸ್ಕೂಲು ಮೇಸ್ಟರಿಗೇಕೆ ನಾನು ಮಾಲೆ ಹಿಡಿದೆನೆಂದು ಚಿಂತಿಸಿದರು. ನಾನಂದೆ...."ಒಂದು ಗಂಡಿಗೊಂದು ಹೆಣ್ಣು ಆ ಗಂಡಿನ ಗುಂಡಿಗೆ ಕಾಯೋದು ನಮ್ಮ ಕೆಲಸ"... ಆ ಮಹಾತಾಯಿ ಸಾವಿತ್ರಿ ಯಮನ ಹತ್ರ ಹೋರಾಡಿ ತಾಳಿ ಇಸ್ಕೊಂಡು ಬರಲಿಲ್ಲವೆ?—ನಾನಂತೂ ಅವರನ್ನೇ ಆಗುವುದು—ಇಲ್ಲವಾದರೆ ಹೀಗೇ ಓದಿ ಮೇಡಮ್ಮಾಗಿಬಿಡುವೆ" ಎಂದು ಹಠ ಸಾಧಿಸಿದೆ...."

"ತುಂಬ ಧೈರ್ಯವಂತರಮ್ಮ ನೀವು"

"ಹಾಗಿರದೆ ಇದ್ರೆ....ಯಾರ ಹಂಗೂ ಇರೋಲ್ಲ ಕಣ್ರಿ ಮೀನಾಕ್ಷಮ್ಮ.... ನಾನೇನು ಕುರುಡು ಪ್ರೇಮಕ್ಕೆ ಸಿಕ್ಕಿ ಕಾಡುಪಾಪನ್ನ ವರಿಸಿದೆನೆ?... ಅವರ ಕಣ್ಣಲ್ಲಿ ಕೈಹಿಡಿದವಳ ಮಾತು ಮಿಾರದ ಮಿಂಚು ಹೊಳೆಯಿತು... ಕೈಯ್ಯಲ್ಲಿ ಕೊಡಲಿ ಹಿಡಿದು ಕಾಪ್ಯವ್ಯಸನ ಪರಿಹರಿಸೆನು ಎಂಬ ಕಸುವು ಕಾಣುತ್ತಿತ್ತು.... ಮೇಲಾಗಿ ಮೇಷ್ಟ್ರು ಮನಸಾಗಿಬಿಟ್ಟರೆ ರಜ—ಸದಾ ಮನೇಲಿ ನನ್ನೊಡನೆ ಸುಧಾಮನ ಹಾಗೆ ನಲಿಯಬಹುದು....ಈ ಮುಂದಾಲೋಚನೆ ಮಾಡಿ ಆ ಸತ್ಯವಂತರಿಗೇ ಮಾಲೆ ಹಿಡಿದೆ...."

"....ಸರಿ....ಆ ಮೇಲೆ??"

"ಆ ಮೇಲೇನು....ನಾರಾಯಣಾಚಾರ್ರು ಮುಹೂರ್ತ ನೋಡಿದರು—ಅಪ್ಪ—ಅಮ್ಮ—"ಸುಮಂಗಲೀ ಭವ"—ದೇವರ ಮೇಲೆ ಭಾರ ಹಾಕಿ ಚಪ್ಪರ ಹಾಕಿ—ಮ್ಯಾಳದವರನ್ನ ಕರಸಿ ಸುಲಗ್ನವನ್ನು ಸಾವಧಾನಮಾಡದೆ ಬೇಗ

ಅಂತರ ಪಟಹಿಡಿದು ಅಕ್ಕಿಕಾಳು ಹಾಕಿಸಿ ಗೆದ್ದೆವೆಂದು ಕೈಕೊಡವಿಕೊಂಡರು.... ನಾನು ಹಳದಿ ಟ್ರಂಕು—ಹಾಸಿಗೆಯೊಡಗೂಡಿ ನನ್ನ ಸತ್ಯವಾನರ ಕುಟೀರ ಸೇರಿದೆ...."

"ಸ್ವಂತ ಸಂಸಾರ .. ಎಷ್ಟೆ ಆಗಲಿ—ಹ್ಹಿಹ್ಹಿ...."

"ಅತ್ತೆ ಮಾವಂದಿರ ಸೇವೆ ಮಾಡಿ ಯಜಮಾನರಿಗೆ ಸ್ಕೂಲಿನ ಹೊತ್ತಿಗೆ ಅಡಿಗೆ ಬಡಿಸಿ ರಾಮಕೃಷ್ಣ—ಸಾವಿತ್ರಿ, ಸರಸ್ವತಿ ಅಂತ ಕಾಲಹಾಕಿಕೊಂಡು ಸಂಸಾರ ಸಾಗಿಸಿದ್ದೆ. ಇದಕ್ಕಿಂತ ಹೆಚ್ಚಿನದೇನು ಸುಖ ಮೀನಾಕ್ಷಮ್ಮನೋರೆ.... ಸಜ್ಜನರಿಗೆ?.. .ಆದರೂ ಮನಸ್ಸಿನೊಳಗೇ ದುಗುಡ.. ಕಳವಳ ಒಂದು ವರ್ಷ ಕಳೆಯೋದರಲ್ಲೆ ನನ್ನ ಕಾಡಿಸಿತು—ಬಾರಿಬಾರಿಗೆ ಕುಂಕುಮ ಮುಟ್ಟಿ ನೋಡಿ ಕೊಂಡೆ—ತಾಳಿಗೆ ಕಗ್ಗಂಟುಹಾಕಿದೆ . ನಾರದರ ನುಡಿ ಕಿವಿಯಲ್ಲಿ ಮಿಡಿದು ಎದೆ ದುಗುಡಕ್ಕೀಡಾಗಿ ಡವಡವಿಸಿತು "

"....ಪಾಪ ಅಲ್ಲವೆ ಮತ್ತೆ...."

"ಆದರೂ ಈ ಪವಿತ್ರ ಪತಿವ್ರತೆಯ ತೇಜಸ್ಸಿನಲ್ಲಿ ನಂಬಿಕೆ ಇತ್ತು.... ಮೀನಾಕ್ಷಮ್ಮನೋರೇ .. ಏನು ಹೇಳಲಿ . ಒಂದು ಭಾನುವಾರ ಇದೇ ಹುಣ್ಣಿಮೆ ಬೋಂಡಾ ತಿನ್ನಬೇಕೆಂಬುವ ಆಸೆಯಾಗಿದೆ .. ಮನೆಯಲ್ಲಿ ಕಡ್ಡಿಯಷ್ಟು ಕಟ್ಟಿಗೆ ಇಲ್ಲ....ಹೆಗಲಿಗೆ ಕೊಡಲಿ ಏರಿಸಿ ಹೊರಟರು...."ಪ್ರಿಯಾ.. ನಾನೂ ಜೊತೆಗೆ ಬರುವೆ" ಎಂದೆ. "ಸುಕೋಮಲೆ ನಿನಗೇಕೆ ಕಾತುರ" ಎಂದರೂ ಕೇಳದೆ ಹಿಂಬಾಲಿಸಿದೆ. ಅವತ್ತಿಗೆ ಸರಿಯಾಗಿ ವರ್ಷ ತುಂಬಿತ್ತು ನನ್ನ ಲಗ್ನವಾಗಿ .. ನಾರಾಯಣಾಚಾರ್ರು ಇದೇ ಸಮಯಕ್ಕೆ ತಾಳಿ ಭದ್ರ ಎಂದಿದ್ದರು—ಕಣ್ಣು ನೀರುಡಿಸಿತು...."ಕಾಂತೆ ಏಕೆ ಕಣ್ಣೀರು?" ಎಂದರು. "ಪ್ರಿಯಾ, ಪಾರಿಜಾತದ ಧೂಳು ಕಣ್ಣಲ್ಲಿ ಬಿದ್ದಿತು .. " ಎಂದು ನೆಪ ಹೇಳಿ ಕಣ್ಣೊರಸಿದೆ . "

"ಎಷ್ಟು ಕಷ್ಟದ ವ್ಯಥೆ ಸಹಿಸಿದ್ದೀರಿ... "

"ಕೇಳಿ ಮುಂದೆ... ಒಣಗಿ ನಿಂತ ಮರ ಒಂದನ್ನು ನೋಡಿ . ಹೆಗಲಮೇಲ ಟಾಲನ್ನು ಸೊಂಟಕ್ಕೆ ಬಿಗಿದು... ಕೊಡಲಿಯನ್ನು ಎತ್ತಿ ಮರದ ಕಿರುರೆಂಬೆಗೆ ಗುರಿ ಇಟ್ಟು ಹೊಡೆಯಬೇಕು ಹಾಗೇ ಏನನ್ನೋ ದಿಟ್ಟಿಸಿ ನೋಡಿದರು ನನ್ನ ಎದೆ ಝುಲ್ ಎಂದಿತು. ಅವರು ನೆಟ್ಟ ದೃಷ್ಟಿ ತೆಗೆಯದೆ "ಸಾವಿತ್ರೀ ಸಂಕಟಾ" ಎಂದರು. ನಾನು ಬಿಗಿಯಾಗಿ ಮಂಗಳ ಸೂತ್ರ ಹಿಡಿದುಕೊಂಡು "ಸಂಕಟವೆ!" ಎಂದೆನ್ನಲು ಬೊಟ್ಟು ಮಾಡಿ ಪೂರ್ವ ದಿಕ್ಕಿನ ಕಡೆ ತೋರಿಸಿದರು. ತೊದಲಿ ತೊತ್ತಿನಂತೆ ದಿಕ್ಕು ತೋಚದೆ ಮುಖ ಕಪ್ಪಿಟ್ಟಿತು. "ಸಾವಿತ್ರೀ....ಯಮ.... ಸತ್ತೆ ಸತ್ತೆ" ಎಂದು ವದರಿದರು."

"ಯಮ!!! ಅಬ್ಬಾ—ಅವರಿಗೆ ಹೇಗೆ ಕಂಡ?"

"ಪರಾಂಬರಿಸಿ ಮಿನಾಕ್ಷಮ್ಮ....ಪಥ ಸಾಗಬೇಕಾದರೆ ಪಠಾಣನ ಶರಣು ಹೋಗಿದ್ದರು. ಆ ಯಮ ಸೈಕಲ್ ಎಂಬ ಕೋಣನನ್ನೇರಿ ಚಾವಟಿ ಎಂಬ ಪಾಶ ಹಿಡಿದು ಯಮನ ಹಾಗೇ ಬಂದ... ಬಹಳ ದಿನಗಳಿಂದ ತಲೆತಪ್ಪಿಸಿ ಕೊಂಡು ಕಾಡಿಸಿದ್ದರು. ಇವತ್ತು ಒಬ್ಬರೇ ಸಿಕ್ಕಮೇಲೆ ಬಿಡುವನೇ ಅವನು— ಬಂದೇಬಿಟ್ಟ...."

"ಇನ್ನೇನು ಗತಿ ಸಾವಿತ್ರಮ್ಮ....ಆ ಮೇಲೆ?"

"ಗ್ರಹಚಾರ ನೋಡಿ ಹೇಗೆ ಕೂಡಿಬರುತ್ತೆ....ಬಂದವನೇ ಅವನು "ಏ! ಸತ್ಯಾ ನಾರಾಯಣ್....ಪುಪ್ಪ್ನೆ ಬಾಕಿ ಕೊಡ್ತಕದಾ ಇಲ್ಲ ನಿನ್ನ ಪರಾಣ ತೆಗೆದು ಬಿಡ್ತಾವ್" ಎಂದು ಪಾಶ ಬೀರಿದ. ಇವರು—"ಹಲ್ಲು ಹಿಡಿದು ಮಾತಾಡು" ಎಂದು ಮಾತು ಉಚಾಯಿಸಿದರು. ಅವನು ರೇಗಿ ಇವರನ್ನ ತಳ್ಳಿಬಿಟ್ಟ ಪಾಪಿ "ಹಾಯ್ ಸಾವಿತ್ರಿ" ಎಂದು ಬಿದ್ದುಬಿಟ್ಟರು. "ಪ್ರಿಯಾ ಪ್ರಿಯಾ" ಎಂದು ಬೊಬ್ಬೆ ಇಟ್ಟೆ—"ಎಲೈ ಯಮನೆ ನೀನೇನು ಮಾಡಿದಿ....ಪಠಾಣರು ತಮ್ಮ ದೇಶಕ್ಕೆ ಹೋಗಬೇಕೂನ್ನೊ ಆಜ್ಞೆ ಗೊತ್ತಿಲ್ಲವೆ?—ಪೋಲೀಸರಿಗೆ ಹೇಳಿ ನಿನ್ನ ಅಟ್ಟಸಿಬಿಟ್ಟೇನು... ನನ್ನ ಯಜಮಾನರ ಪ್ರಾಣ ತೆಗಿಬೇಡ" ಎಂದು ನಾನು ಕೆರಳಿದ ಕಾಳಿಯಂತೆ ಕೆಂಡ ಕಾರಿದೆ. ಆ ಯಮ ಕೊಂಚ ಹೆದರಿದ....ಯಜ ಮಾನರು ಸತ್ತಹಾಗೆ ಬಿದ್ದಿದ್ದರು ...ಮುಡಿಗೆದರಿ ಕೂಗಿ ಹತ್ತಾರು ಜನ ಬರು ವಂತೆ ಮಾಡಿ ನೀನು ಇವರನ್ನು ಕೊಂದೆ ಎಂದು ನಿನ್ನ ಜೈಲಿಗೆ ಹಾಕಿಸು ವೆನು—ಸುಮ್ಮನೆ ಹೊರಡು—ಇಲ್ಲವಾದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ ಎಂದೆ. ಕೊಡೋ ದುಡ್ಡು ಕೊಟ್ಟುಬಿಡಲಿ ನಾನೇಕೆ ಕಾಡಿಸುತ್ತೇನೆ ಪ್ರಾಣ ತೆಗೆಯು ತ್ತೇನೆ—ಎಂದು ಅವನ ವಾದ. ನಮ್ಮನೆಯವರು ಬಿದ್ದ ದೃಶ್ಯ ನೋಡಿ ಸಹಿಸ ದಾಯಿತು.—ಈ ಯಮನನ್ನ ಕಂಡರೆ ನಾವಿದ್ದ ಹಳ್ಳಿಯಲ್ಲಿ ಎಲ್ಲರೂ ಕೆಂಡ ಕಾರುವರು—ಈ ಪಾಪಿ ಅನೇಕ ಸಾವಿತ್ರಿಯರ ಸತ್ಯವಾನರನ್ನು ಕಾಡಿಸಿದ್ದ— ನಾನು ಧೈರ್ಯದಿಂದ "ಕೂಗಿಕೊಂಡರೆ ಈ ಗೌಡ ಶಾನುಭೋಗಾದಿ ಎಲ್ಲರೂ ಬಂದು ಬಿದ್ದ ಯಜಮಾನರನ್ನು ಕಂಡು—ನಿನ್ನನ್ನು ಸದೆಬಡಿಯುವರು— ಮೊದಲೇ ನಿನ್ನ ಕಂಡರೆ ಆಗದು ಹೇಗಿದ್ದರೂ ಬಡ್ಡಿರೂಪದಲ್ಲಿ ಅಸಲಿನ ನಾಲ್ಕ ರಷ್ಟು ತಿಂದಿದ್ದೀಯ—ಸುಮ್ಮನೇ ಪತ್ರ ಬಿಸಾಕಿ ಪರಾರಿಯಾಗು—ಇಲ್ಲವೇ ಕೂಗುವೆ ಎಂದು—ಹಾ! ಕಾಂತಾ—ಹಾಕಾಂತ"—ಎಂದು ಬೊಬ್ಬೆ ಇಟ್ಟೆ...."

"ಶಿವ ಶಿವ ಎಂತಹ ದೃಶ್ಯ...."

“ಆ ಯಮ ಹೆದರಿದ—ಇನ್ನು ಮಾನನಷ್ಟ ಕೋರ್ಟು ಎಂದು ಕೇಸು ಹಾಕಿ ಹಳ್ಳಿಯವರು ಹೊಡೆದಾರು ಎಂದು—ಮಾಸ್ತರು ಬದುಕಲಿ ಇಕೋ ನಿಮ್ಮ ಧೈರ್ಯ ನೋಡಿ ಪತ್ರ ಹರಿದ್ಹಾಕ್ತೀನಿ ಎಂದು ಪತ್ರ ಬಿಸಾಕಿ—ಸೈಕಲ್ ಹತ್ತಿ ಪರಾರಿಯಾದ ...ಆ ಯಮ....”

“ಅಬ್ಬಾ ! ಯಮನ ಸೋಲು....”

“....ಉಸ್ಸಪ್ಪ....“ಪೀಡೆ ತೊಲಗಿತು ಏಳಿ—ಪುನರ್ಜನ್ಮ ಬಂದ್ಹಾಗಾಯ್ತು” ಎಂದ ಕೂಡಲೆ ಸತ್ತಂತೆ ಬಿದ್ದವರು ಕೊಡವಿಕೊಂಡು ಎದ್ದರು. ಕಸುವಿನಿಂದ ಕೊಡಲಿ ಎತ್ತಿ ಮರ ಸೀಳಿ ಕಂತೆ ಮಾಡಿ ಮನೆ ಸೇರಿದೆವು....ಅವತ್ತು ಇದೇ ವಟ ಸಾವಿತ್ರಿ ಹುಣ್ಣಿಮೆ ಬೊಂಡಾ ಜೊತೆಗೆ ಖೀರು, ಚಿತ್ರಾನ್ನಾನೂ ಮಾಡಿ ಪೂಜೆ ಮಾಡಿದೆವು....ಆ ಮೇಲೆ ಮೊಳಕಾಲ್ಮುರುವಿಗೆ ವರ್ಗಮಾಡಿಸಿಕೊಂಡರು....ಅಲ್ಲೆ ನೋಡಿ ಈ ಪೀತಾಂಬರ ನೇಯಿಸಿದ್ದು....”

“ಅಬ್ಬ ಎಷ್ಟು ಕಷ್ಟ ಅನುಭವಿಸಿದ್ದೀರಿ....ಅಂತೂ ಪುಣ್ಯವಂತರಮ್ಮ.... ಅಯ್ಯೋ ಆಗಲೆ ೮-೩೦ ಗಂಟೆಯಾಯ್ತು ಯಜಮಾನರು ಬರೋ ಹೊತ್ತಾಯ್ತು ....ಬರ್ತೀನಿ ಸಾವಿತ್ರಮ್ಮನೋರೆ....”

‘ಒಳ್ಳೇದು ಮೀನಾಕ್ಷಮ್ಮ ..ಆಗಿಂದಾಗ್ಗೆ ಬರ್ತಾಯಿರಿ.....ಕುಂಕುಮ ಕೊಳ್ಳಿ. ..”

— ದಾಶರಥಿ ದೀಕ್ಷಿತ್.




ಒಳ್ಳೇ ಸುದ್ದೀ—ನಾಳೆ ಭಾರೀ ಔತಣ ಕೂಟವಂತೆ.

# ಲೀಲೂವಿನ ಯೋಜನೆ

---

ಆಗಸ್ಟ್ ಹದಿನೈದು. ಬೇಗ ಬೆಳಿಗ್ಗೆ ಎದ್ದು ಸ್ನಾನ ಸಂಧ್ಯಾವಂದನೆ ಮಾಡಿ ರಾಷ್ಟ್ರಪಿತನನ್ನು ಧ್ಯಾನಿಸಿ, ಸಾರ್ವಜನಿಕ ಸಭೆಗೆ ಹೊರಟಿದ್ದೆ. ಹೀಗಂತ ಕೊರವಂಜಿಯಲ್ಲಿ ಬರೆದರೆ ಯಾರೂ ನಂಬುವುದೇ ಇಲ್ಲ ಅಲ್ಲವೇ? ಹೋಗಲಿ ಬಿಡಿ.

ಅವತ್ತು ಬೆಳಿಗ್ಗೆ ಸಾವಧಾನವಾಗಿ ಎದ್ದು, ಕಾಳಖಾನಾ ಮಂದಿರದಲ್ಲಿ ಎರಡು ಮಸಾಲೆ ಮುಗಿಸಿ ಕೆರೆ ಅಂಗಳಕ್ಕೆ ಬಂದವರನ್ನು ನೋಡೋಣ ಎಂದು ಹೊರಡುತ್ತಿದ್ದೆ, ಮನೆಯಿಂದ ಎಂಟು ಎಂಟೂವರೆಗೆ.

"ನೋಡಣ್ಣಾ" ಅಂದಳು ಲೀಲು.

"ಏನಮ್ಮಾ?" ಅಂದೆ.

"ಅಲ್ಲಿ ನೋಡಣ್ಣಾ! ಏರೋಪ್ಲೇನೆಲ್ಲಾ ಹಾರಾಡ್ತಾ ಇದೆ" ಅಂದಳು.

ಎಂಟು ವಯಸ್ಸಿನಲ್ಲಿ, ಹಾರಾಡೋದೇನೇ ಆದರೂ ನೋಡೋ ಕುತೂಹಲ. ಹಾರೋಪ್ಲೇನೇ ಆಗಲಿ, ಹಾರಾಡೋ ರಾಜಕಾರಣಿಯೇ ಆಗಲಿ, ಹುಡುಗರ ಮನಸ್ಸಿಗೆ ಬಲು ಖುಷಿ.

"ಹೌದಮ್ಮಾ! ಅದು ಸ್ವತಂತ್ರ ಭಾರತದ ಏರೋಪ್ಲೇನು" ಅಂತ ಹೇಳಿ, ಹೊರಹೊರಟೆ.

ನನ್ನ ಸಂಚಾರ ಮುಗಿಸಿಕೊಂಡು ಮನೆಗೆ ಬರೋ ಹೊತ್ತಿಗೆ ಮಧ್ಯಾಹ್ನ ಒಂದು ಗಂಟೆ. ಊಟ ಮಾಡಿ ಮಲಗಿ ಏಳೋವಾಗ ಸಾಯಂಕಾಲ ನಾಲ್ಕು ಗಂಟೆ. ಎದ್ದು ಹೊರಗೆ ಬರ್ತೀನಿ, ಲೀಲು ಕಾಂಪೌಂಡಿನಲ್ಲಿ ತನ್ನ ನಾಲ್ಕು ಜತೆಗಾರ್ತಿಯರೊಂದಿಗೆ ಏನೋ ಆಡುತ್ತಿದ್ದಳು.

ಮೆಲ್ಲಗೆ ಅಲ್ಲಿಗೆ ಹೋದೆ.

"ಏನಮ್ಮಾ ಆಡ್ತಾ ಇದೀರಿ?" ಎಂದೆ.

"ಏರೋಪ್ಲೇನಿಂದ ಬಿತ್ತಣ್ಣಾ ಈ ಕಾಗದ" ಅಂತ 'ಹೆಚ್ಚು ಆಹಾರ ಬೆಳೆಯಿರಿ' ಸಂದೇಶವನ್ನು ನನಗೆ ತೋರಿಸಿದಳು.

“ಸರೀಷ್ಮಾ! ನಿಮ್ಮ ಆಟ ಏನು? ಅದು ಹೇಳಲೇ ಇಲ್ಲವಲ್ಲಾ” ಎಂದೆ.

“ಅದೇ ಅಣ್ಣಾ ಆಟ ಆಡ್ತಾಇರೋದು ನಾವು.

“ಹೆಚ್ಚು ಆಹಾರ ಬೆಳೆಯಿರಿ ಆಟ” ಅಂದಳು.

ಅದು ಹೇಗಮ್ಮಾ ಆಡ್ತೀರಿ, ಈ ಆಟಾನ ಎಂದೆ. ಆಗ ಲೀಲು ಹೇಳಿದಳು.

“ನೋಡಣ್ಣಾ, ನಾನೂ, ಕಮಲ, ಸುಧಾ ಎಲ್ಲರೂ ಮೊದಲು ಈ ತರಹ ಕಾಗದಗಳನ್ನು ಬರೆದೆವು. ಹತ್ತು ಹತ್ತು ಕಾಪಿ ಮಾಡಿದೆವು. ಅವನ್ನೆಲ್ಲಾ ಒಂದೊಂದು ಹೆಂಚಿಕಡ್ಡಿಗೆ ಸಿಕ್ಕಿಸಿ ಅಲ್ಲಲ್ಲಲ್ಲೇ ಹೂತೆವು. ಅಲ್ಲಿ ಕಾಣಿಸುಲ್ವೇ ನಣ್ಣಾ ಅದೇ! ಅಂತ ತೋರಿಸಿದಳು. ಆ ಮೇಲೆ ಆ ಹೆಂಚಿಕಡ್ಡಿಗಳಿಗೆಲ್ಲಾ ಸಣ್ಣ ಸಣ್ಣ ಪಾತಿ ಮಾಡಿ ನೀರು ಹಾಕಿದೆವು. ನಾಳೆ ಇಷ್ಟು ಹೊತ್ತಿಗೇಣ್ಣಾ! ಆ ಮೂವತ್ತು ಚೀಟಿಗಳೂ ಬೆಳೆದು ಮುನ್ನೂರು ಆಗಿರುಲ್ವೇಣ್ಣಾ!

ಆ ಮೇಲೆ ಏನ್ಮಾಡ್ತೀರಾ!

ನೋಡಣ್ಣಾ, ಈ ಬೀಜಾನ ಮೆರವಣಿಗೇಲಿ ತೆಗೆದುಕೊಂಡು ಬರ್ತೀವಿ ಅಂತ ಒಂದು ಬೀಜ ತೋರಿಸಿದಳು. ಹುಣಿಸೇ ಬೀಜ!. ಅದನ್ನ ತಂದು ಒಳ್ಳೇ ಘಳಿಗೇಲಿ, ಹಾಡು ಹೇಳ್ತಾ ಇರೋವಾಗ, ದೊಡ್ಡೋರ ಕೈಲಿ ಇಲ್ಲಿ ನೆಡಸ್ತೀವಿ. ನೀನೇ ಆ ಕೆಲಸ ಮಾಡ್ತೀಯಾಣ್ಣಾ? ಫುಲ್ ಸೂಟು ಹಾಕಿಕೊಂಡು, ಸರಿಗೆ ರುಮಾಲು ಸುತ್ತಿಕೊಂಡು, ನೀನು ಛೇರ್‌ಮನ್ ಆಗಿ ಆ ಬೀಜ ನೆಡಣ್ಣಾ!

“ಸರೀಮ್ಮಾ! ಆಗಬಹುದು! ಆ ಮೇಲೆ?”

“ಆ ಮೇಲೆ ನಾವೆಲ್ಲಾ ಒಬ್ಬರಾಗುತ್ತಲೂ ಒಬ್ಬರು ಭಾಷಣ ಮಾಡ್ತೀವಣ್ಣಾ. ಆ ಕಾಗದದಲ್ಲಿದೆಯಲ್ಲಾ ಹಾಗೇ ಮಾತಾಡ್ತೀವಣ್ಣಾ.”

ಆ ಮೇಲೆ ಅಮ್ಮನ ಹತ್ತಿರ ಹೋಗಿ ‘ಚರ್ಪು’ ತೆಗೆದುಕೊಂಡು ಬಂದು ಎಲ್ಲರಿಗೂ ಹಂಚಿ ತಿನ್ನುತ್ತೀವಣ್ಣಾ! ಅಂದಳು.

* * *

ಲೀಲೂ ಯೋಜನೆಯಂತೆ ನಾನು ನೇವಿಬ್ಲೂ ಸೂಟು ಧರಿಸಿ, ಮೈಸೂರು ಸರಿಗೆ ರುಮಾಲು ಸುತ್ತಿ, ಸೆಂಟ್ ಹಚ್ಚಿಕೊಂಡು, ಈ ಹುಡುಗಿಯರೆಲ್ಲಾ ಮಂಗಳ ವಾದ್ಯ ಮಾಡುತ್ತಿದ್ದ ಸುಮುಹೂರ್ತದಲ್ಲಿ ಒಂದು ಹುಣಿಸೇ ಬೀಜಾನ ಸಿಮೆಂಟ್

ಹಾಕಿದ್ದ ಜಾಗದಲ್ಲಿ, ಒಂದು ಮೋಳೇಲಿ ತೂತು ಕೊರೆದು, ನೆಟ್ಟಿ. ಈ ಚಿಕ್ಕ ಹುಡುಗಿಯರೆಲ್ಲರೂ ಚಪ್ಪಾಳೆ ತಟ್ಟಿ ನಕ್ಕರು.

ಚರ್ಪು ಹಂಚಿದರು. ಪುರಿ ತೆಂಗಿನಕಾಯಿ ಎಷ್ಟೋ ದಿವಸಕ್ಕೆ ಅವತ್ತೇ ನನಗೆ ಸಿಕ್ಕಿದ್ದು.

* * *

ಅಲ್ಲಾ! ಎಲ್ಲೋ ಓದ್ದಹಾಗೆ ಜ್ಞಾಪಕ.

"ಮನುಜನಿಗೆ ಮಗು ತಂದೆ" ಅಂತ! ಅಲ್ಲವೇ ?

* * *

—ಶಿವು.

—o—



# ಜಯಕಾರ

—ಗಾಂಧಿಜಿ ಹಿಂದುಸ್ತಾನಿ ಭಾಷಯನ್ನು ರಾಷ್ಟ್ರಭಾಷೆಯಾಗಿ ಅಂಗೀಕರಿಸಬೇಕೆಂದೂ, ಅದನ್ನು ನಾಗರಿ ಉರ್ದು ಎರಡು ಲಿಪಿಗಳಲ್ಲೂ ಬರೆಯಲು ಅವಕಾಶವಿರಬೇಕೆಂದರು. ನಾವೀಗ ಹಿಂದಿ—ನಾಗರಿ ಎಂದು ವಾದಿಸಿ ಸಾಧಿಸುತ್ತಿದ್ದೇವೆ....ಗಾಂಧಿಕಿ ಜೈ.

—ಗಾಂಧಿಜಿ ಉಪ್ಪಿನ ಮೇಲಿನ ಶಿರಿಗೆಯನ್ನು ತೊಡೆದು ಹಾಕಬೇಕೆಂದರು. ನಾವೀಗ ರಚಿಸಿರುವ ರಾಜ್ಯಾಂಗದಲ್ಲಿ ಆ ತೆರಿಗೆಯನ್ನು ನಿಷೇಧಿಸಿಲ್ಲ... .ಗಾಂಧಿಕಿ ಜೈ.

—ಗಾಂಧಿಜಿ ಖದ್ದರನ್ನೇ ಎಲ್ಲ ಜನಸೇವಕರೂ ಧರಿಸಬೇಕೆಂದೂ, ಅವರೆಲ್ಲರೂ ದಿನವೂ ನೂಲು ತೆಗೆಯಬೇಕೆಂದೂ ಹೇಳಿದರು. ನಾವೀಗ .. ಗಾಂಧಿಕಿ ಜೈ.

—ಗಾಂಧಿಜಿ ಯಾವ ಮಂತ್ರಿಗೂ ತಿಂಗಳೊಂದಕ್ಕೆ ರೂ. ೫೦೦ ರ ಮೇಲೆ ವರಮಾನವಿರಲಾಗದು, ಎಂದರು ನಮ್ಮವರೀಗ.. ಗಾಂಧಿಕಿ ಜೈ.

—ಗಾಂಧಿಜಿ ಔಷದೋಪಚಾರಗಳ ಸಹಾಯವಿಲ್ಲದೆ, ಪ್ರಕೃತಿ ದತ್ತವಾದ ಶಕ್ತಿ ಹಾಗೂ ಯುಕ್ತಿಗಳಿಂದಲೇ, ರೋಗಗಳನ್ನು ಶಮನಮಾಡಿಕೊಳ್ಳಬೇಕೆಂದರು. ನಾವೀಗ .. ಗಾಂಧಿಕಿ ಜೈ.

—ಗಾಂಧಿಜಿ ಶಿಕ್ಷಣ ಕ್ರಮವನ್ನು ತಿದ್ದಿ 'ಮೂಲ ಶಿಕ್ಷಣ ಕ್ರಮ'ವನ್ನು ದೇಶದಾದ್ಯಂತ ನೆಲಗೊಳಿಸಬೇಕೆಂದಂದರು... ಮೂಲ ಶಿಕ್ಷಣ ಮೂಲೆಯಲ್ಲಿ ಬಿದ್ದಿದೆ....ಗಾಂಧಿಕಿ ಜೈ.

—ಗಾಂಧಿಜಿ ತನ್ನನ್ನು ಯಾರೂ 'ಮಹಾತ್ಮ' ಎನಬಾರದು; ತನಗಾಗಿ ಯಾವ ಗುಡಿ ಗೋಪುರಗಳನ್ನು ಕಟ್ಟಬಾರದೆಂದರು. ನಾವೀಗ ...ಗಾಂಧಿಕಿ ಜೈ.

—ಗಾಂಧಿಜಿ ನವೀನ ವಿಶ್ವವನ್ನೇ ಸತ್ಯ, ಅಹಿಂಸೆಗಳ ಆಧಾರದ ಮೇಲೆ ನಿಲ್ಲಿಸಲು ಯತ್ನಿಸಿದರು ...ನಾವೀಗ, ಅವರನ್ನು "ಹಿಂದುಸ್ತಾನದ ರಾಷ್ಟ್ರ ಪಿತ" ಎಂದು ಕುಗ್ಗಿಸಿದೇವೆ.

ಗಾಂಧಿಕಿ ಜೈ.

---

# "ತೊಪ್ಪಳ ಕಿಟ್ಟಯ್ಯ"

"ತೊಪ್ಪಳ"ದವರಲ್ಲಿ ಕಿಟ್ಟಯ್ಯ ಬಲು ಮುಂದಕ್ಕೆ ಬಂದಿದ್ದ. ಮಲನಾಡು ತಪ್ಪಲಿನಲ್ಲಿ ಕಂಬಳಿ ಮಾಡುತ್ತಿದ್ದವರ ಮುಖಂಡನಾಗಿ ಕಂಬಳಿಯನ್ನು ಲಾಟ್ ಲಾಟಾಗಿ ಯುದ್ಧಕಾಲದಲ್ಲಿ ಮಾರಿ ತಕ್ಕಮಟ್ಟಿಗೆ ಹಣ ಸಂಪಾದಿಸಿದ್ದ. ಅಂದ ಮೇಲೆ ಷಹರಿನ ದೊಡ್ಡ ದೊಡ್ಡ ಕಂಪೆನಿಗಳಲ್ಲಿ ಡೈರೆಕ್ಟರಾಗಿ ನೇಮಕವಾಗಿದ್ದು, ಆಶ್ಚರ್ಯವಲ್ಲ.

ಅಂತಹದೊಂದು ಕಂಪೆನಿ "ಗೆಣಸಿನ ಜಲಾಂಶವನ್ನು ತೆಗೆದು ಒಣಗಿಸಿ ಮಾರುವುದು." ಹೀಗೆ ಮಾಡಿ ಗೆಣಸನ್ನು ಎಲ್ಲಾ ಕಡೆಗೂ ಕಳುಹಿಸಿ ಆಹಾರ ಸಮಸ್ಯೆ ಪರಿಹರಿಸುವುದೇ ಕಂಪೆನಿಯ ಹೆಗ್ಗುರಿ. ಹಾಗೂ ಯಥಾನುಶಕ್ತಿ ಹಣ ಗಳಿಸುವುದೇ ಕಿರಿಗುರಿ. ನಮ್ಮ ಕಿಟ್ಟಯ್ಯ ಈ ಕಂಪೆನಿಗೆ ಡೈರೆಕ್ಟರಾದ. ಕಾರ್ಖಾನೆಯ ಕಟ್ಟಡಕ್ಕೇ ನಾಲ್ಕು ಲಕ್ಷ ರೂಪಾಯಿಗಳು. ಅದರ ಕಂಟ್ರಾಕ್ಟು ಕಿಟ್ಟಯ್ಯನ ಸೋದರಳಿಯನ ಹೆಸರಿನಲ್ಲಿ ತೆಗೆದುಕೊಂಡಿದ್ದ. ಕಿಟ್ಟಯ್ಯ ಹಾಕಿದ ಇಪ್ಪತ್ತು ಸಾವಿರ ಬಂಡವಾಳದ ಎರಡರಷ್ಟು ಈ ಕಂಟ್ರಾಕ್ಟಿನಲ್ಲೇ ಬಂದಿತ್ತು.

ಈ ಖುಷಿಗೆ ಕಿಟ್ಟಯ್ಯ ಕಾರ್ಖಾನೆಯ ಕೆಲಸಗಾರರಿಗೆಲ್ಲಾ ಒಂದೊಂದು ಕಂಬಳಿ ಮುಫತ್ತಾಗಿ ಕೊಟ್ಟಿದ್ದ. ಈ ಸುದ್ದಿ ಎಲ್ಲಾ ಪತ್ರಿಕೆಗಳಲ್ಲೂ ಬಂದಿತ್ತು.

ಆ ಸಾರಿ ತೊಪ್ಪಳ ಕಿಟ್ಟಯ್ಯ 'ಧರ್ಮಸಾಗರ'ನಾದುದು ಏನಾಶ್ಚರ್ಯ ?

* * *

ಬಿರುದಾಂಕಿತನಿಗೆ ತೊಪ್ಪಳದವರೆಲ್ಲಾ ಸನ್ಮಾನ ಸಭೆ ಏರ್ಪಡಿಸಬೇಕೆಂದು ಮಸಲತ್ತು ಹೂಡುತ್ತಿದ್ದರು.

* * *

ಷಹರಿನಲ್ಲಿ ಒಂದು ದೂರಶ್ರವಣದ ಕಾರ್ಖಾನೆ. ಮಣ್ಣು ದೋಣಿ ನೆಚ್ಚಿಕೊಂಡು ಹೊಳೆ ದಾಟಿದ ಹಾಗೆ, ಆ ದೂರಶ್ರವಣದ ಕಾರ್ಖಾನೆ ಬಿಳಿ ಮಣ್ಣು ನೆಚ್ಚಿಕೊಂಡು ನಡುನೀರಿನಲ್ಲಿ ನಿಂತಿತ್ತು. ಆದರೆ ಕಾರ್ಖಾನೆ ಕಂಟ್ರಾಕ್ಟ್ ಮಾಡಿದ ಕಿಟ್ಟಯ್ಯನಿಗೆ ಲಾಭದ ಹಣ ಬರುವ ಸೂಚನೆ ಇತ್ತಿಲ್ಲ. ತನ್ನ ಬಂಡವಾಳವೇನೋ ಬಂದಿತ್ತು. ಹಾಗಾಗಿ ಆ ಕಾರ್ಖಾನೆ ಚೇತರಿಸಿಕೊಳ್ಳುವು

ದಕ್ಕೆ ಮುಂಚೆಯೇ ಅಲ್ಲಿದ್ದ ಸಾವಿರಾರು ಮಾರಾಟವಾಗದೇ ಇದ್ದ 'ದೂರ ಶ್ರವಣ'ಗಳನ್ನು ಅವುಗಳ ನಿವ್ವಳ ಬೆಲೆಗೆ ಕೊಂಡುಕೊಂಡ. ಹೇಗೋ ಮಾರಿ ಕೊಂಡು ಆದಷ್ಟು ಮಾಡಿಕೊಳ್ಳೋಣ ಅಂತ.

ಆಗಲೇ ಸನ್ಮಾನ ಸಭೆಗೆ ಆಹ್ವಾನ ಬಂದಿದ್ದು. ತೊಪ್ಪಳದ ಮುಖಂಡರು ಬಂದು ಖುದ್ದಾಗಿ ಕರೆದಿದ್ದು.

ಧರ್ಮಸಾಗರೂಗೆ ಗೊತ್ತು. ಸನ್ಮಾನ ಸಭೆಗೆ ಹೋದರೆ ಅವರು ಹಾಕಿದ ತಿಂಡಿ, ಹಿರಿ ಹೂವಿನ ಮಾಲೆಗೆ ಕಡೇ ಪಕ್ಷ ಸಾವಿರ ರೂಪಾಯಿ ಚಂದಾ ಕೊಡಲೇ ಬೇಕಾಗುತ್ತೆ—ಕುಲಬಾಂಧವರ ಏಳಿಗೆಗೆ—ಅಂತ. ಆಗಲೇ ಅವನಿಗೆ ಹೊಳೆದಿದ್ದು ಯೋಚನೆ.

ಸನ್ಮಾನ ಸಭೆ ಕಿಕ್ಕಿರಿದಿತ್ತು. ಭಾಷಣಕಾರರು ಮಾತನಾಡಿದ್ದು, ಮಾತು ಗಳನ್ನಲ್ಲ—ಜೇನು ಹನಿಗಳನ್ನು. ಕುಲಬಾಂಧವರ ಏಳಿಗೆಗೆಂದು ಅವರು ಕೇಳಿದ್ದು ಸಾವಿರವನ್ನಲ್ಲ. ಧರ್ಮಸಾಗರನ ಅಧ್ಯಕ್ಷತೆಯಲ್ಲಿ ಒಂದು ಬಾಂಧವರ ಗೋಷ್ಠಿ. ಕಿಟ್ಟಯ್ಯನಿಗೆ ತೋಚದೆ ಇರಲಿಲ್ಲ. ಇದು ಗೋಷ್ಠಿಯಲ್ಲ! ಒಂದು ಜಾಲ ಎಂದು.

ಕತ್ತಿನಿಂದ ಕಾಲಿನ ತನಕ ಇದ್ದ ಒಂದು ದೊಡ್ಡ ಹೆಬ್ಬಾವಿನಂತಹ ಹಾರವನ್ನು ಹಾಕಿದರು. ಈ ಹಾರವೇ ನೇಣು ಎಂದು ಧರ್ಮ ಸಾಗರನಿಗೆ ತೋಚದೆ ಇರಲಿಲ್ಲ.

ಅವನು ಭಾಷಣ ಮಾಡಿದಾಗ, ಹೊಳೆದಿದ್ದ ಯೋಜನೆಗೆ ರೂಪುಕೊಟ್ಟ. "ಕುಲಬಾಂಧವರ ಏಳಿಗೆಗೆ ಲೋಕ ವ್ಯವಹಾರ ಜ್ಞಾನಬೇಕು. ಅದು ತಿಳಿಯ ಬೇಕಾದರೆ, ದೂರಶ್ರವಣದ ಯಂತ್ರಗಳು ಬೇಕು." ಈ ಮೂಲಭೂತ ಸೌಕರ್ಯವನ್ನು ಹಿರಿಯರ ಬುದ್ಧಿವಾದದಂತೆ ತಾನು ತನ್ನವರಿಗೆ ಕಲ್ಪಿಸಿ ಕೊಡಲು ಯೋಚಿಸಿದ್ದೆನೆಂತಲೂ, ಪ್ರತಿ ಒಂದು ಗ್ರಾಮಕ್ಕೂ ಒಂದೊಂದು ದೂರಶ್ರವಣ ಯಂತ್ರವನ್ನು ಮುಫತ್ತಾಗಿ ಕೊಡುವೆನೆಂದೂ ಭರವಸೆ ಕೊಟ್ಟ.

ಎಲ್ಲರೂ ಕೈತಟ್ಟಿ ಚಪ್ಪಾಳೆ ಹಾಕಿದರು. ವಿದ್ಯುಚ್ಛಕ್ತಿ ಇಲ್ಲದ ಗ್ರಾಮ ಸ್ಥರೂ, ಧನ್ಯವಾದಗಳನ್ನರ್ಪಿಸಿದರು.

ಜೈ! ಧರ್ಮಸಾಗರು ತೊಪ್ಪಳ ಕಿಟ್ಟಯ್ಯ! ಎಂಬ ಕೂಗು ನಭೋ ಮಂಡಲವನ್ನೇ ಭೇದಿಸಿತು. ಅದೇ ಧ್ವನಿ ದೂರಶ್ರವಣಗಳ ಯಂತ್ರದಲ್ಲಿ ಬಹುಕಾಲ ಕೇಳಿಸಿತಂತೆ.

—ಹೆಚ್‌ಎಲ್.

# ಸಂಪಾದಕರಿಗೊಂದು ಪತ್ರ

ಬೆಂಗಳೂರು
(ಬೆಂದಕಾಳೂರೆಂದು ಕನ್ನಡದಲ್ಲಿ ಬರೆದರೆ ಚೆನ್ನಲ್ಲವೇ?)
15-8-1949

'ಕೊರವಂಜಿ' ಸಂಪಾದಕರಿಗೆ ನಮಸ್ಕಾರಗಳು.

**ಅಯ್ಯಾ,** (ಸ್ವತಂತ್ರರಾಗಿರುವ ನಾವು ಸ್ವಾಮಿ ಎಂದು ಸಂಭೋದಿಸುವುದು ಸರ್ವಥಾ ಸರಿಯಲ್ಲ)

ಭಾರತಕ್ಕೆ (ನಿಮಗೆ ಹಿಂದೂ ದೇಶ ಅಥವಾ ಹಿಂದೂಸ್ಥಾನ್ ಎನ್ನುವುದು ಪ್ರಿಯವಾದರೆ ಹಾಗೆಯೇ ಓದಿಕೊಳ್ಳಿ) ಸ್ವಾತಂತ್ರ್ಯ ಬಂದು ವರ್ಷಗಳೆರಡು ಸಂದರೂ, ನಾನು ಇಂದಿನವರೆಗೂ ಯಾವ ಸ್ವತಂತ್ರ ದಿನದ ಪ್ರತಿಜ್ಞೆಯನ್ನೂ ಮಾಡಿದವನಲ್ಲ. ಆದರಿಂದು, ಸ್ವಾತಂತ್ರ್ಯೋತ್ಸವದಂದು, ನಾನು ಅನೇಕ ಪ್ರತಿಜ್ಞೆಗಳನ್ನು ಮಾಡಲೇಬೇಕೆಂದು ನಿನ್ನೆ ಇದೇ ಮೇಜಿನ ಮುಂದೆ ನಿರ್ಧರಿಸಿದೆ. ಆದುದರಿಂದ ಇಂದು, ಇಲ್ಲಿ, ಇದೇ ಮೇಜಿನಮುಂದೆ (ಗಿರಣಿ ಮಾಲಿಕ ನಾಹುಕಾರ್....ಶ್ರೀ ...ಪ್ಪನವರ ಆಫೀಸಿನ ಮೂಲೆಯಲ್ಲಿ) ಆ ಪ್ರತಿಜ್ಞೆಗಳನ್ನು ಮಾಡಲು ಸಿದ್ಧನಾಗಿದ್ದೇನೆ. ನನ್ನ ಪ್ರತಿಜ್ಞೆಗಳಿವು.

1. ನಾನು ಇಂದಿನಿಂದ ಯಾರಿಗೂ, ಯಾವ ರೀತಿಯಲ್ಲೂ ಅಡಿಯಾಳಲ್ಲ. ನನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವ ಯಾವ ರೀತಿಯ ಅಡ್ಡಿ ಆತಂಕಗಳನ್ನೂ ಸದೆಬಡಿಯಲು ನಾನು ಧೃಢಮನಸ್ಸಿನಿಂದ, ಇಂದಿನಿಂದ ಕಂಕಣ ಬದ್ಧನಾಗುತ್ತೇನೆ.

2. ನಮ್ಮ ದೇಶದ ಸ್ವಾತಂತ್ರ್ಯದ ಸಾರ್ಥಕತೆಯನ್ನು ಬೇಗ ಪಡೆಯಲು ನಾನು ಯಾವ ರಾಜಕೀಯ ಪಕ್ಷಕ್ಕೂ ಸೇರುವುದಿಲ್ಲ ಮತ್ತು ಜಟಿಲವಾದ ರಾಜಕೀಯ ಜಾಲದಿಂದ ದೂರವಾಗಿರಲು ನನ್ನ ಕೈಲಾದ ಪ್ರಯತ್ನವೆಲ್ಲವನ್ನೂ ಮಾಡುತ್ತೇನೆ.

...... .. ..... ....... ......

10. ನಮ್ಮ ಆಡಳಿತಗಾರರ ಕೆಲಸ ಕಾರ್ಯಗಳು ಸುಸೂತ್ರವಾಗಿ ನಡೆಯಲು ಲಂಚರುಷುವತ್ತುಗಳನ್ನು ಕೊಡುವುದನ್ನೂ, ಶಿಫಾರಸು ಪಡೆಯುವುದನ್ನೂ, ಅದರಿಂದ ಸ್ವಕಾರ್ಯ—ಸ್ವಾಮಿಕಾರ್ಯವನ್ನೆಲ್ಲ—ಸಾಧನೆಮಾಡಿಕೊಳ್ಳುವುದನ್ನೂ ಇಂದಿನಿಂದ ನಿಲ್ಲಿಸಿರುತ್ತೇನೆ.

.............................................

ದೇಶವೆಲ್ಲ ಕ್ಷಾಮದ ಭಯದಿಂದ ನಡುಗುತ್ತಿರುವಾಗ ನಮ್ಮ ಸರ್ಕಾರದವರಿತ್ತಿರುವ ಸೂಚನೆಯಂತೆ ಹೆಚ್ಚು ಆಹಾರ ಬೆಳೆಯಲು ನನ್ನ ಕೈಲಾದ ಮಟ್ಟಿಗೂ ಪ್ರಯತ್ನಿಸುತ್ತೇನೆ, ಮತ್ತು ಬೆಳೆದ ಆಹಾರ ನನ್ನ ಸಂಸಾರ ಪೂರ್ತ ಆದರೆ ನನ್ನ ರೇಷ್ಠ ಕಾರ್ಡನ್ನು ಸರ್ಕಾರಕ್ಕೇ ಹಿಂತಿರುಗಿಸುತ್ತೇನೆ .. ಇತ್ಯಾದಿ ನನ್ನ ಪ್ರತಿಜ್ಞೆಗಳು ನೂರ ಆರರವರೆಗೂ ಇವೆ, ಇನ್ನೂ ಮುಂದುಗಡೆ ಇವೇ ಮೇಜಿನಮೇಲೆ.

ಆದರೆ........

ನಾನು ಇಂದಿನಿಂದ ಸ್ವತಂತ್ರನೆಂದು ಪ್ರತಿಜ್ಞೆಮಾಡಿದರೂ, ತುಳಿಯಲಾರದ ತೊಡರು ಎಡರುಗಳಿಂದಲೂ, ಆತಂಕ ಅಡ್ಡಿಗಳಿಂದಲೂ ಇದೇ ಸಾಹುಕಾರರ ಬಳಿ ಕೆಲಸಮಾಡದೆ ವಿಧಿಯಿಲ್ಲವಾಗಿದೆ. ಆದುದರಿಂದ ಯಾರಾದರೂ—ನನಗೆ ಮದುವೆಯಾಗಿ ಆಗಲೇ ಹತ್ತು ವರ್ಷಗಳಾಗಿವೆ, ಸಾಲದುದಕ್ಕೆ ಮೂರು ಹೆಣ್ಣು ಮಕ್ಕಳು, ಮಾವನಿಂದ ಯಾವ ಸಹಾಯವನ್ನೂ ಅಪೇಕ್ಷಿಸುತ್ತಿಲ್ಲ —ಒಂದು ಸಣ್ಣ ಉದ್ಯಮವನ್ನು ಸ್ಥಾಪಿಸಿಕೊಟ್ಟರೆ ನಾನು ಖಂಡಿತ ಸ್ವತಂತ್ರನಾಗಿಯೇ ಇರುತ್ತೇನೆ. ಮುಂದಿನ ಚುನಾವಣೆಯಲ್ಲಿ ನಾನು ಓಟಿಗಾಗಿ ಗೋಣಿ* ಮಾಡುವಾಗ ನಾನು ನನ್ನ ಪ್ರತಿಜ್ಞೆಯನ್ನು ಮುರಿದೆನೆಂದು ಆಕ್ಷೇಪಿಸಬೇಡಿ. ಅದೂ ನನಗಾಗಿ ನಾನು ಗೋಣಿ ಮಾಡುವುದಿಲ್ಲ, ನನ್ನ ಸಾಹುಕಾರರಿಗಾಗಿ, ಅವರ 'ಕುರಿ' ಮಾರ್ಕಿಗಾಗಿ. ಅವರಿಂದಲೇ ನಾನು ಸ್ವತಂತ್ರ!. ಅಂತೆಯೇ ನಾನು ಯಾರಿಗೆ ಲಂಚವಿತ್ತರೂ ಶಿಫಾರಸು ಪತ್ರ ತಂದರೂ—ಇಲ್ಲಿ ಸ್ವಕಾರ್ಯ ಲೇಶವೂ ಇರುವುದಿಲ್ಲ, ಎಲ್ಲ ಸ್ವಾಮಿಕಾರ್ಯ ಸಾಧನೆಯೇ—ಕೆಂಪುಲಾಡಿ ಕಟ್ಟಿಸಿದರೂ .. ಎಲ್ಲ ಅವರಿಗಾಗಿಯೇ. ಅದರಿಂದ ನನ್ನ ಜವಾಬ್ದಾರಿ ಯಾವ ರೀತಿಯಲ್ಲೂ ದುರುಪಯೋಗವಾಗಿರುವುದಿಲ್ಲ.

---

ನನಗೇನೋ ನನ್ನ ಮನೆಯಲ್ಲೇ, ನನ್ನ ಕೈಯಿಂದಲೇ, ನನ್ನ ಮೈ ಬೆವರನ್ನು ಸುರಿಸಿಯೇ, ತರಕಾರಿ ಮತ್ತು ಆಹಾರವನ್ನು ಬೆಳೆದು ತಿನ್ನಬೇಕೆಂದು ಬಹಳ ಆಸೆ. ಆದರೆ ನಾನು ವಾಸಿಸುತ್ತಿರುವುದು.. ಪೇಟೆಯ ಗರಾಜೊಂದರಲ್ಲಿ, ಕರಿಯ ಕಡಪಾಕಲ್ಲ ಮೇಲೆ, ಸಾಲದುದಕ್ಕೆ ಮನೆಯ ಮುಂದೆಯೇ ಸಿಮೆಂಟಿನ ಕಾಲು ರಸ್ತೆ ಮತ್ತು ಡಾಂಬರಿಣ್ಣೆಯ ಕಾರು ರಸ್ತೆ. ಆದ್ದರಿಂದ ಬೇರೆಯ ಅನುಕೂಲವಾದ ಬಾಡಿಗೆಯ ಮನೆಯು ದೊರೆಯುವವರೆಗೂ, ನಾನು ಈ

* ಇಂಗ್ಲೀಷಿನ Canvas ಎಂಬುದರ ಕನ್ನಡ, ಸ್ವತಂತ್ರವಾಗಿರುವಾಗ ಅದಷ್ಟು ಕನ್ನಡವನ್ನೇ ಉಪಯೋಗಿಸುವುದೊಳಿತಲ್ಲವೇ ?

ಪ್ರತಿಜ್ಞೆಯನ್ನು—ಮುಂದೆ ಬರುವ ಯಾವುದಾದರೊಂದು ಸ್ವಾತಂತ್ರ್ಯ ದಿನಾಚರಣೆಗೆ—ಮುಂದು ಹಾಕುತ್ತೇನೆ.

ಇತ್ಯಾದಿ .. ನೂರಾರು ನಿರ್ಬಂಧಗಳಿರುವುದರಿಂದ ನನ್ನ ಪ್ರತಿಜ್ಞೆಗಳು ಕಾಗುಣಿತಶಃ ಪರಿಪಾಲನೆಯಾಗದೆ ಹೋದರೆ ಭಾರತದ ಸ್ವಾಕಂತ್ರ್ಯಕ್ಕೇ ಬೊಕ್ಕೆ ಬಂತೆಂದು ಸಂತಾಪ ಪಡದೆ, ಎಲ್ಲರ ಸಂತಾಪವನ್ನೂ ನನ್ನ ಕಡೆಗೆ ತಿರುಗಿಸಿರೆಂದು ಕೋರುವ,

ಸಾಹುಕಾರ್ ಶ್ರೀ...... .ಪ್ಪನವರವ,

**ಹ. ರ. ಕುಪ್ಪಣ್ಣ.**

—o—



# ಅರ್ಜಿ

ತನು ನಿಮ್ಮದು, ಜೀವನ ನಿಮ್ಮದು, ಸ್ವಾಮಿ !
ಅನು ದಿನವೂ ಬಾಹ ಹಸಿವೆಲ್ಲ ನಿಮ್ಮದಯ್ಯಾ !

ಸವಿ ನುಡಿ ಗ್ರೇಡು ಪುರಾಣ ಬಡ್ತಿಗಳೆಲ್ಲ
ಕಿವಿಕೊಟ್ಟು ಕುಣಿಯುವ ಗತಿ ನಿಮ್ಮದು.

ನವಸ್ಕೀಮಿನ ಮೋಹ ಯೋಜನೆ ರೂಪವ
ಎವೆ ಇಕ್ಕದೆ ನೋಡುವ ನೋಟ ನಿಮ್ಮದಯ್ಯಾ.

ಬಡಿದಾಡಿ ಸಾಲ ಷುಅರ್‌ಟಿ ಕಂತುಗಳೆಲ್ಲ
ಬಿಡದೆ ಒದಗಿಸಿಕೊಂಬುವುದು ನಿಮ್ಮದು

ಷಡುರಸದನ್ನಕ್ಕೆ ಪರದಾಡುವ ಜಿಹ್ವೆ
ಕಡು ನರಳಾಟದ ಕಹಿ ನಿಮ್ಮದಯ್ಯಾ

ಕಾಯಾವಾಚಾ ನಮ್ಮ ಸೇವೆಯ ಕೊಳ್ಳುವ
ಮಾಯಾಯ ಕೈ ಕಾಯುವ ಗತಿ ನಿಮ್ಮದಯ್ಯಾ.

———o———




"ತಿಂಡಿ ಕೊಡ್ಸೋ..............."
"ತಡಿಯೋ, ಪಾರ್ಲಿಮೆಂಟರಿ ಸೆಕ್ರೆಟರಿಗಳ ತೀರ್ಮಾನ ಆಗಲಿ."

# "ಜಾಮೂನ್ಸಾಗೀರ್ವಡೆ"

---

"ಇಲ್ಲಿ ಬಾ! ಮಾಣೀ. ಇಪ್ಪತ್ತೈದು ಅರ್ಜಿದಾರರಲ್ಲಿ ನಿನ್ನನ್ನು ಆಯ್ಕೆ ಮಾಡಿದ್ದೇವೆ. ಇಲ್ಲಿ ಸಪ್ಲೈ ಕೆಲಸಕ್ಕೆ—ನಿನ್ನ ಜವಾಬ್ದಾರಿ ಬಹಳ ಹೆಚ್ಚಿನದು, ನೀನು ಬರೀ ಸಪ್ಲೈ ಮಾಡುವುದು ಮಾತ್ರವೇ ಅಲ್ಲ. ಬಂದವರ ಯೋಗಕ್ಷೇಮ ವಿಚಾರಿಸಬೇಕು. ಅವರಿಗೆ ಸಪ್ಲೈ ಮಾಡಲಿ ಮಾಡದೇ ಇರಲಿ. ಅವರಿಗೆ ಬೇಜಾರಾಗದೇ ಇರೋ ಹಾಗೆ ನೋಡಿಕೋಬೇಕು. ಮಕ್ಕಳು ಮರಿ ಬಂದರೆ ಅವನ್ನು ಸಮುದಾಯಿಸಬೇಕು, ಇಲ್ಲ! ನಗಿಸಬೇಕು. ನಿಂತಲ್ಲೇ ಸಪ್ಲೈ ಕೂಗಿದರೆ ಅಡಿಗೆ ಮನೆಗೆ ಕೇಳಿಸಬೇಕು. ನೀನು ಹೇಳಿದ್ದೇನು ಅನ್ನುವುದು ಬಂದವರಿಗೆ ಗೊತ್ತಾಗ ಕೂಡದು. ಆದರೂ, ಅಡಿಗೆ ಮನೆಯಲ್ಲಿ ಚೆನ್ನಾಗಿ ತಿಳಿಯಬೇಕು."

"ಸಾಕು ದುಗ್ಗಪ್ಪಯ್ಯಾ! ವಿಶದೀಕರಿಸಿದ್ದು. ಇವನನ್ನು ಪರೀಕ್ಷೆ ಮಾಡೋಣ."

"ಹಾಗೇ ಆಗಲಿ ಬಿಜ್ಜಣ್ಣಯ್ಯಾ!—ಒಂದೆರಡು ಮಾತು ಮೊದಲು ಹೇಳಿದೆ ಈ ಕೆಲಸದ ವಿಚಾರ ಅಷ್ಟೆ!"

"ಎಲ್ಲಿ ಮಾಣಿ, ನೀನು ಮೊದಲು ಪತ್ರಿಕೆಗಳನ್ನು ಸಂತೇ ಚೌಕದಲ್ಲಿ ಮಾರುತ್ತಿದ್ದೆ ಅಂದೆಯಲ್ಲ! ಧ್ವನಿ ಚೆನ್ನಾಗಿರಬಹುದು, ಅಲ್ಲವೇ—ಎಲ್ಲಿ ಒಂದು ಕೂಗು ಹಾಕು."

"ಏನಂತ ಕೂಗಲಿ?"

"ಏನಾದರೂ ಕೂಗು."

"ಹಾಗಂದರೆ ಹೇಗೆ?"

"ಆ ಬೀರೂವಿನಲ್ಲಿ ಕಾಣುತ್ತಲ್ಲ ಆ ತಿಂಡಿಗಳ ಹೆಸರು ಕೂಗು—"

"ಜಾಮೂನ್ಸಾಗೀರ್ವಡೆ. ಟೂಬೈತ್ರಿ"—

"ಜಾಮೂನ್ಸಾಗೀರ್ವಡೆ. ಟೂಬೈತ್ರಿ"—

"ಪರವಾಗಿಲ್ಲ ದುಗ್ಗಪ್ಪಯ್ಯಾ! ಕಂಠ ಚೆನ್ನಾಗ್ಗಿದೆ—ಅಡಿಗೆ ಮನೇಲಿ ಅರ್ಥ ವಾಗುತ್ತೆ. ಆದರೂ ಸ್ವಲ್ಪ ಮಾತುಗಳು ಇನ್ನೂ ಹೊರಳಬೇಕು ಅಂತೀನಿ. ಇನ್ನೂ ಕ್ಷೀರ ಹರಿದ ಹಾಗೆ ಹರೀಬೇಕು. ಮೊಸರಿನಲ್ಲಿ ವಡೆ ತೇಲಿದ ಹಾಗೆ ತೇಲಬೇಕು ಮಾತುಗಳು—ಅಲ್ಲವೇ?"

"ಸರಿಯಾಗಂದೆ ಬಿಜ್ಜಣ್ಣಯ್ಯಾ!—ಅದೇ, ನಾನೂ ಅನ್ಕೊಂಡಿದ್ದು. ಎಲ್ಲಿ ಮಾಣಿ ಇನ್ನೊಂದು ಸರ್ತಿ ಕೂಗು—ಮಾತು ಹೊರಳಿಸಿ ಕೂಗು—ಹೀಗೆ. ಜಾ....ಮುಂಜಾ... ಗೀರ್ವಡೇ... ಟು ಬತ್ರಿ"

"ಜಾ....ಮುಂಜಾ....ಗೀರ್ವಡೆ ಟು ಬತ್ರೀ"

"ಭೇಷ್! ಬಲು ಚೆನ್ನಾಗಿ ಅರಚಿದೆ ಮಾಣಿ. ಎಲ್ಲಿ ಮೂರ್ನಸಾಲೆ ಎರಡು ದಂರೋಟ್, ಎರಡು ಸ್ಪೆಷಲ್" ಅಂತ ಕೂಗು.

"ಮರ್ನಸಾಲೆರಡ್‌ದಂ ರೋಟ್ಸ್ಪೆಷಲ್"

"ವಹವ್ವಾ! ಚೆನ್ನಾಗಿ ಕಿರಿಚಿದೆ—ದುಗ್ಗಪ್ಪಯ್ಯಾ! ಇವನು ಆಗಬಹುದೂ ಅಂತೀನಿ"

"ಹೌದು ಬಿಜ್ಜಣ್ಣಯ್ಯಾ, ಇವನನ್ನು ಭದ್ರಮಾಡಿಕೊಳ್ಳಬಹುದು—ಮಾತು ಹೊರಳಿಸ್ತಾನೆ—ಧ್ವನಿ ಚೆನ್ನು. "ಆದರೆ ಮಾಣಿ ಒಂದು ಬುದ್ಧಿವಾದ ಮಾತು —ಬಂದವರು ಯಾರಾದರೂ ರೇಡಿಯೋ ಇದೆಯೇ ಅಂತ ಕೇಳಿದರೆ—ರಿಪೇರಿಗೆ ಹೋಗಿದೆ ಅನ್ನು—ಅದನ್ನು ತಪ್ಪಿಸಿಕೊಳ್ಳೊಕ್ಕೇ ಜನ ಹಾಗೆ ಕೇಳೋದು. ಒಳಕ್ಕೆ ಬಂದ ಮೇಲೆ ತಿಂಡಿ ಇಟ್ಟ ಮೇಲೆ, ರೇಡಿಯೋ ತಿರುಗಿಸಿದರೆ ಪರವಾಗಿಲ್ಲ!

ಸೋಮವಾರದಿಂದ ಕೆಲಸಕ್ಕೆ ಬಾ"

"ನಂ. ಸ್ಥೆ" ಅಂದು ಮಾಣಿ ಹೊರಬಿದ್ದ.

———— o ————

ಶಾಲೆಗಳನ್ನು ವಾರಕ್ಕೆ ಮೂರು ದಿವಸ ನಡೆಸಿ, ಉಳಿದ ನಾಲ್ಕು ದಿನಗಳು ಅಲ್ಲಿ ಏನೂ ಕೆಲಸಕಾರ್ಯಗಳು ನಡೆಸಬಾರದೆಂದು ಚಕ್ರವರ್ತಿ ರಾಜ ಗೋಪಾಲಾಚಾರಿಯವರು ಹೇಳಿರುವ ಕ್ರಮ ಆಗಲೇ ಮಾದರೀ ಸಂಸ್ಥಾನದ ಅನೇಕ ಶಾಲೆಗಳಲ್ಲಿ ಅನುಸರಣೆಯಲ್ಲಿರುವುದಾಗಿ ಹೇಳುತ್ತಾರೆ.

# —★ || ಮೂರು ಪ್ರಶ್ನೆಗಳು || ★—

ನಮ್ಮೂರಿಗೊಂದು ಸಲ ರವೀಂದ್ರನಾಥ ಟಾಗೂರರು ಬಂದಿದ್ದರು. "ಅರಣ್ಯ ಸಂದೇಶ" ಎಂಬ ಅವರ ಉಪನ್ಯಾಸವನ್ನು ಹಿಂದಿನ ಸಂಜೆ ಕೊಟ್ಟು, ಅವರು ಊರ ಮನವನ್ನೇ ಸೂರೆಮಾಡಿದ್ದರು. ನಾವು ನಾಲ್ಕೈದು ಹುಡುಗರು ಮರುದಿನ ಬೆಳಗ್ಗೆ ಕವೀಂದ್ರರ ಬಿಡಾರಕ್ಕೆ ಹೋಗಿ, ಅವರೊಂದಿಗೆ ಆ ಭಾಷಣದ ಸಾರವನ್ನು ಮೆಲುಕು ಹಾಕುತ್ತಿದ್ದೆವು. ಅವರ ಅಮೃತವಾಣಿಯ ಸವಿಯನ್ನು ಅವರ ಸಾನ್ನಿಧ್ಯದಲ್ಲೇ ಕುಳಿತು, ಬಾಯ್ದೆರೆದು, ಮೆದುಳಿಗೆ ಪರಿಮಳ ಬೆರೆಸುತ್ತಿದ್ದೆವು. ಸುಮಾರು ಒಂಭತ್ತು ಗಂಟೆ ಇರಬಹುದು. ರವೀಂದ್ರರು ಗಡಿಯಾರ ನೋಡಿದರು. ನಮಗೆ ಭಯವಾಯಿತು. ಆದರೆ, ಅವರು ನಮ್ಮ ಮೇಲಿನ ಪ್ರೀತಿಯಿಂದ, "ನೀವು ಇಲ್ಲೇ ಇರಿ! ಯಾರೋ ಮೂರು ಜನ ಈ ಊರಿನ ಪ್ರಮುಖರು ನನ್ನನ್ನು ಭೇಟಿಯಾಗಲು ಬರುವುದಾಗಿ ಹೇಳಿದ್ದರು. 9 ಗಂಟೆಗೆ ಬನ್ನಿ, ಎಂದು ನಾನು ತಿಳಿಸಿದ್ದೆ. ನೀವು ಇಲ್ಲೇ ಪಕ್ಕದ ರೂಮಲ್ಲಿ ಕುಳಿತಿರಿ" ಎಂದರು. ಹೋಗಲಿ! ಆ ರೂಮಲ್ಲಿದ್ದು, ಆ ಭೇಟಿಯನ್ನೂ ಕೇಳಬಹುದಲ್ಲಾ, ಎಂದು ನಾವು ಹಿಗ್ಗಿದೆವು.

**3 ಜನ**—ಸರ್ವಾಲಂಕಾರ ಭೂಷಿತರು—ನಯವಿನಯ ಸಂಪನ್ನರು,—ಶ್ರೀಮಂತರು—ನಮ್ಮೂರಿಗೆ ಯಾವ ದೊಡ್ಡಮನುಷ್ಯರು ಬಂದರೂ ಅವರನ್ನು ಕಂಡು ಕೈಮುಗಿಯುವುದೇ ಸಂಪ್ರದಾಯವಾಗಿಟ್ಟುಕೊಂಡಿದ್ದ 3 ಮಹನೀಯರು—ಮೆಲ್ಲಗೆ, ಕೆನೆಯುತ್ತ, ಕತ್ತು ಕೊಂಕಿಸುತ್ತ, ಒಳಕ್ಕೆ ಬಂದರು. ನಾವು ಸರಕ್ಕನೆ ನಮ್ಮ ರೂಮಿನೊಳಕ್ಕೆ ಧಾವಿಸಿ, ಕಿವಿ ಅರಳಿಸಿದುವು.

ಠಾಕೂರರು ಅವರನ್ನು ಆಸನಸ್ಥರಾಗುವಂತೆ ಸನ್ನೆ ಮಾಡಿದರು. ಅವರೂ ನಿಧಾನವಾಗಿ, ಸೋಫಾದಲ್ಲಿ ಸುಖಾಸೀನರಾದರು. ನಮ್ಮ ಕಿವಿ ಅರಳುತ್ತಲೇ ಇತ್ತು. ಆದರೆ, ಆಚೆ ಕೋಣೆಯಿಂದ ಯಾವ ಸದ್ದೂ ಹೊರಬರಲಿಲ್ಲ. ಮನೆ ....ನಿಶ್ಶಬ್ದ....ಚಪ್!! ಚಿಪ್!

ಮತ್ತೆ 5 ನಿಮಿಷ ಕಳೆಯಿತು. ನಿಶ್ಶಬ್ದವಾಗಿ, ಮತ್ತೊಬ್ಬರ ಮಾತನ್ನು ನಿರೀಕ್ಷಿಸುತ್ತಾ, 5 ನಿಮಿಷ ಕಾಯುವುದೆಂದರೆ, ಎಷ್ಟು ಭಯಂಕರವಾಗಿರುತ್ತದೆ, ಎಂದು ಗೊತ್ತಾಗಬೇಕಾದರೆ, ಕೊಂಚ ಕಾದು ನೋಡಿ. ಯುಗ....ಯುಗ.... ಕಾದಹಾಗಿರುತ್ತದೆ. ಪಾಪ! ಬಂದಿದ್ದ ಭೇಟಿಗಾರರು ಸಾಹಿತಿಗಳಾಗಿದ್ದಿದ್ದರೆ,

ಸಾಹಿತ್ಯ ವಿಮರ್ಶೆ ಮಾಡಬಹುದಾಗಿತ್ತು! ದೇಶಸೇವಕರಾಗಿದ್ದಿದ್ದರೆ, ಅದನ್ನು ಕುರಿತು ಚರ್ಚಿಸಬಹುದಾಗಿತ್ತು. ಅರಣ್ಯ ಸಂದೇಶವನ್ನು ಕೇಳಿ ಅರ್ಥಮಾಡಿ ಕೊಂಡಿದ್ದರೆ, ಅದರ ಸ್ಫೂರ್ತಿಯನ್ನು ಆಸ್ವಾದಿಸಿದ ನಮ್ಮಂತೆ ಉನ್ಮಾದರಾಗಿ, ಕವೀಂದ್ರರಿಗೆ ತಮ್ಮ ಋಣವನ್ನು ಒಪ್ಪಿಸಬಹುದಾಗಿತ್ತು, ಆದರೆ, ಅವರು ಕೇವಲ .. ಭೇಟೀ ಪ್ರಿಯರು! ಭೇಟೀ ವ್ರತರು. ಸುಮ್ಮನೆ, ನಾವೂ ಠಾಕೂರ ರನ್ನು ನೋಡಿದೆವು, ಎಂಬ ಹೆಸರು ಬೇಕಾಗಿತ್ತು, ಅವರಿಗೆ, ಅಷ್ಟೆ.

5 ನಿಮಿಷ ಕಳೆಯಿತು! ಆಗ ಅವರಲ್ಲೊಬ್ಬರಿಗೆ, ಗಂಟಲೊಡೆಯಿತು; ನಾಲಗೆ ನಾದ ಕಂಡಿತು. "ಸ್ವಾಮಿ! ತಾವು ಬಂದದ್ದು ಯಾವಾಗ?" ಎಂದರು. ಠಾಕೂರರು ಚಕಿತರಾದರು. "ನಾನೆ? ನಿನ್ನೆ ಬಂದೆ!"....ಮತ್ತೆ ಮೌನ! ಆಗ ಮತ್ತೊಬ್ಬರು, "ಸ್ವಾಮಿ, ತಾವು ಹೊರಡೋದು ಯಾವಾಗ?" ಎಂದರು. ಠಾಕೂರರು ಮತ್ತೆ ಚಕಿತರಾದರು ..."ನಾಳೆ ಹೊರಡುತ್ತೇನೆ" ಎಂದರು. ಮತ್ತೆ 3ನೆಯವರಿಗೆ,· ಆಗ ನಾನೂ ಕವೀಂದ್ರರನ್ನು ಮಾತನಾಡಿ ಸಲೇಬೇಕು, ಎನಿಸಿತು. ನಾಳೆ ಹೊರಡುತ್ತೇನೆ, ಎಂದು ಕವಿಗಳು ಹೇಳಿದಾಗ, ಅವರು, "ಯಾಕೆ" ಎಂದು ಕೇಳಿದರು. ಅದಕ್ಕೆ ಠಾಕೂರರು "ಯಾಕೆ ಅಂದರೆ ಏನು ಹೇಳೋಣ?" ಎಂದು ಉತ್ತರ ಕೊಟ್ಟರು. .ಸರಿ. ಅಲ್ಲಿಗೆ ಮುರಿಯಿತು, ಮಾತಿನ ಸರಪಳಿ. ಮತ್ತೆ, ಕೋಣೆಯನ್ನು ಮೌನ ಆವರಿಸಿತು. 2 ನಿಮಿಷ ವಾಗುತ್ತಲೂ, ರವೀಂದ್ರರೆದ್ದರು. ಅವರೂ ಏಳಬೇಕಾಯಿತು! ಉದ್ದಕ್ಕೂ ಕೈಮುಗಿಯುತ್ತ, ಅವರು ಕೋಣೆಯಿಂದ ಹೊರಬಿದ್ದರು. ಭೇಟಿ ಮುಗಿಯಿತು. ಇದೂ ಒಂದು ಸಂಪ್ರದಾಯ ಬದ್ಧವಾದ ಭೇಟಿ. ಕೇವಲ ಶುಷ್ಕವಾದ ಭೇಟಿ. ವೃಥಾ ಕಾಲಕ್ಷೇಪ.

ನಾವು ಹೊರಗೆ ಬಂದಾಗ, ನಗು ತಡೆಯಲು, ನಮ್ಮಿಂದಾಗಲಿಲ್ಲ. ರವೀಂದ್ರರೇನೋ ತಮ್ಮ ಕಟು ಟೀಕೆಯನ್ನು ಹೊರಗೆಡಹಲಿಲ್ಲ. ಅವರಿಗೆ ಇಂಥ ಭೇಟಿಗಳೆಷ್ಟೋ... ಊರೂರಲ್ಲೂ, ಇಂಥ ಅನುಭವಗಳು ಅವರಿಗೆ ಸಿಕ್ಕೇ ಸಿಕ್ಕುತ್ತವೆ. ಕನಿಕರದಿಂದ ಅವರು ಆ ಶ್ರೀಮಂತರನ್ನು ಕ್ಷಮಿಸಿದರು. ಭೇಟಿ ಮಾಡುವುದಕ್ಕೆ ಹೋಗುವವರು, ಯಾರನ್ನು ಭೇಟಿ ಮಾಡುತ್ತೇವೋ ಅವರಿಗೆ ಪ್ರಿಯವಾದ ಯಾವುದಾದರೂ ವಿಷಯಗಳನ್ನು ಕೊಂಚ ಹೊತ್ತು ವಿಮರ್ಶಿ ಸುವಷ್ಟಾದರೂ ವಿದ್ಯೆ ಸಂಪಾದಿಸಿರಬೇಕು, ಎಂಬ ಮೂಲ ಸಂಪ್ರದಾಯ, ಜಾರಿಗೆ ಬಂದರೆ, ಆಗ ಎಲ್ಲರಿಗೂ ಸುಖ.

— ಗೋಪಾಲ ಪೈ.

—— o ——

# ಒಂದು ಹಳೇ ಕತೆ

ಅತ್ತೆ—ಸೊಸೆ ಜಗಳಗಳಿಗೆಲ್ಲ, ಕಾರಣ ಇಷ್ಟು! ಅತ್ತೆ ಹಿಂದಿನ ಕಾಲದವಳು; ಸೊಸೆ ಈಗಿನ ಕಾಲದವಳು. ಅಲ್ಲದೆ, ಅತ್ತೆಗೆ ಅಸೂಯೆ ಬೇರೆ! ಎಲಾ! ನಾನು ಸಾಕಿ ಸಲಹಿದ ಮಗ, ಈಗ ಇವಳ ಮುಂದೆ ನಿಗಿನಿಗಿ ನಗುತ್ತಾನಲ್ಲಾ, ಇವಳನ್ನೇ ತನ್ನ ಪ್ರೀತಿಯ ಪುತ್ಥಳಿಯಾಗಿ ಸ್ವೀಕರಿಸಿದಾನಲ್ಲಾ, ಎಂಬ ಅಸೂಯೆ. ಅಂತು, ಸಂಸಾರದಲ್ಲಿ ಅತ್ತೆಗೊಂದು ಕಾಲ ಬಂದೇ ಬರುತ್ತಾನೆ.

ಹಾಗೊಂದು ಸಂಸಾರದಲ್ಲಿ ಆಯಿತು. ಅತ್ತೆಗೆ ಸಂಕಟ. ಏನಿದು, ನಾನು ಹೊರಟುಹೋದ ಮೇಲೆ, ಈ ಸೊಸೆ ಸುಖವಾಗಿ, ನನ್ನಂಥವಳ ಕಿರುಕುಳ ಇಲ್ಲದೆ, ಹಾಯಾಗಿ, ತನ್ನ ಗಂಡನೊಂದಿಗಿರುತ್ತಾಳಲ್ಲಾ, ಎಂಬ ಹೊಟ್ಟೆ ಉರಿ, ಅವಳಿಗೆ. ಸೊಸೆಗೆ, ಪಾಪ, ಅತ್ತೆ ದರ್ಬಾರಿನಲ್ಲಿ ಸ್ವಾತಂತ್ರ್ಯ ಅನ್ನೋದೇ ಇರಲಿಲ್ಲ. ಅವಳಿಗೆ ಸ್ವಬುದ್ಧಿ, ಸ್ವಾಭಿಮಾನ, ಎಲ್ಲವೂ ಶೂನ್ಯ. ಅತ್ತೆ ಮಾತೇ ವೇದವಾಕ್ಯ. ಅವಳು ಹಾಕಿದ ಗೆರೇನ ದಾಟಿದರೆ, ಸರ್ವನಾಶ, ಎಂಬ ಭೀತಿ.

ಅಡಿಗೆ ಏನು ಮಾಡುವುದು?—ಅತ್ತೇನ ಕೇಳಬೇಕು. ದೇವಸ್ಥಾನಕ್ಕೆ ಹೋಗಲೆ?—ಅತ್ತೆ ಏನಂತಾಳೊ?—ಹೀಗೆ ಹೆದರಿ ಮುರಿದು ಬಾಳಿದವಳು; ಆಕೆ ನೆರಳಿನಲ್ಲಿ ಬಾಡಿದವಳು.

ಅತ್ತೆಯ ಮಂಚದ ಹತ್ತಿರ ಅಳುತ್ತ ನಿಂತಿದ್ದಳು, ಸೊಸೆ. ಅತ್ತೆಗೆ ಆಗ ಒಂದು ಯೋಜನೆ ಹೊಳೆಯಿತು. ಅಲ್ಲೇ ಇದ್ದ ಡಬ್ಬಿಯಿಂದ ಸುಣ್ಣ ತೆಗೆದು, ಗೋಡೆ ಮೇಲೆ ಬೆರಳಿಂದ ಒಂದು ಆಕಾರ ಬರೆದಳು. "ನೋಡು! ನಾನು ಹೋದರೂ, ಈ ಆಕಾರದಲ್ಲಿ ಸೇರಿಕೊಂಡು, ಇಲ್ಲೇ, ಈ ಮನೆಯಲ್ಲೇ ಸುಳಿದಾಡುತ್ತಿರುತ್ತೇನೆ. ನೀನು ಮಾಡೋದನ್ನೆಲ್ಲ, ಇಲ್ಲೇ ಇದ್ದುಕೊಂಡು ನೋಡುತ್ತಿರುತ್ತೇನೆ, ಹುಷಾರ್!" ಎಂದಳು. ಹೊರಟೇ ಹೋದಳು.

ಈಗಲೂ, ಪಾಪ, ಸೊಸೆ ಆ ಗೋಡೆ ಚಿತ್ರದ ಹತ್ರಕ್ಕೆ ಹೋಗಿ, ಅಡಿಗೆ ಏನು ಮಾಡುವುದು? ದೇವಸ್ಥಾನಕ್ಕೆ ಹೋಗಲೆ?—ಎಂದು ಕೇಳುತ್ತಿದಾಳಂತೆ. ನಿಜವಾಗಿಯೂ, ಆ ಗೋಡೆ ಚಿತ್ರದಲ್ಲಿ ಅತ್ತೆ ಕೂತಿದಾಳೆ ಎಂಬುದೇ ಆ ಹುಡುಗಿಯ ನಂಬಿಕೆ. ಹಸುಳೆಯ ಮನಕ್ಕೆ ಮೊಸಳೆಯ ಭೀತಿ.

— ಶಾಸ್ತ್ರೀ.

# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

ವಾರ್ಷಿಕ ಚಂದಾ : 3 ರೂ.ಗಳು (ಅಂಚೆ ವೆಚ್ಚ ಸಹಿತ)


## ನಮ್ಮ ಮಾರಾಟಗಾರರು

| | |
|---|---|
| ಶ್ರೀ ಶ್ರೀರಾಮ ನ್ಯೂಸ್ ಏಜನ್ಸಿ – | – ತಿಪಟೂರು |
| ,, ವಿ. ಶ್ಯಾಮ ಐಂಗಾರ್ – | – ಮದ್ದೂರು |
| ,, ಎಲ್. ಶೇಷಾದ್ರಿ – | – ಅರಸೀಕೆರೆ |
| ,, ಎ. ಸೀತಾರಾಮಾಚಾರ್ – | ಹೊಳೆನರಸೀಪುರ |
| ,, ಟಿ. ಸಂಜೀವಯ್ಯ ಮತ್ತು ಮಕ್ಕಳು – | ತುಂಕೂರು |
| ,, ಯಸ್. ಎನ್. ಶ್ರೀಕಂಠಯ್ಯ – | ಶ್ರೀರಂಗಪಟ್ಟಣ |
| ,, ಉಮೇಶರಾವ್ – | ಸಾಗರ |
| ,, ಡಿ ವಿ. ರಾಮನ್ – | ಚಾಮರಾಜನಗರ |
| ,, ಮೋಹನಸಿಂಗ್ – | – ಕೋಲಾರ |
| ,, ಜಿ. ಹನುಮಾನ್ ಸಿಂಗ್ | ರಾಮನಗರ (ಕ್ಲೋಸ್‌ಪೇಟೆ |
| ,, ಓ. ಕೆ. ಸಿದ್ದಯ್ಯ – | – ಬಳ್ಳಾರಿ |
| ,, ಹೆಚ್. ವೆಂಕೋಬರಾವ್ – | ಬೆಂಗಳೂರು ಸಿಟಿ |
| ,, ಯಸ್ ಶ್ರೀಕಂಠಯ್ಯ – | ಯಶವಂತಪುರ |
| ,, ಸಿ. ಆರ್. ಕೃಷ್ಣಮೂರ್ತಿ (ನಾರಾಯಣಚಾರರ ಸ್ಥಾನದಲ್ಲಿ) – | ಚೆನ್ನಪಟ್ಟಣ |
| ,, ಹಿಗಿನ್‌ಬೋತಾಂ‌ಸ್ – | ರೈಲ್ವೆ ನಿಲ್ದಾಣದ ಪುಸ್ತಕಾಲಯಗಳು |
| ,, ಅಲೆಕ್ಸಾಂಡರ್ ಡಿ'ಸಾ. (ಕಂಕನಡಿ) | ಕಂಕನಡಿ ದ.ಕ! |
| ,, ಯಸ್. ಪಿ. ಬ್ರಮ್ಮದೇವಯ್ಯ – | – ಸಾಲಿಗ್ರಾಮ |
| ,, ಯಸ್. ಚಕ್ರಪಾಣಿ – | – ಕಾಡುಗೋಡಿ |
| ,, ಎನ್. ಗುರುರಾವ್, ಎನ್. ದೇಶಪಾಂಡೆ – | ಬಿಜಾಪುರ |
| ,, ಗೋವಿಂದ ನಾಯಕ್ – | ಉಡುಪಿ ದ.ಕ. |
| ,, ಡಿ. ಗಣಪತಿ ರಾನಡೆ – | ಜೋಗ್-ಫಾಲ್ಸ್ |
| ,, ಹೊನ್ನಗಂಗಪ್ಪ – | – ನೊಣವಿನಕೆರೆ |

(ಮುಂದುವರಿಯುವುದು)

ರಸಿಕರಿಗೆ ಅಚ್ಚುಮೆಚ್ಚಾದುವು

# ಮೈಸೂರು ರೇಷ್ಮೆ ವಸ್ತ್ರಗಳು

## ಮಿತವ್ಯಯ - ಹಾಗೂ, ಸುರುಚಿ.

ಮೈಸೂರು ರೇಷ್ಮೆ — ಸಮಾಜದಲ್ಲಿ ಮೇಲ್ಮೆಯ ಕುರುಹು
ಮುತ್ಸಂಜೆಯಲ್ಲಿ ಅನುಪಮವಾದುದು



ಜಾರ್ಜೆಟ್, ಕ್ರೇಪ್,

ಜಾರ್ಜೆಟ್ ಮತ್ತು ಕ್ರೇಪ್ ಸೀರೆಗಳು

ಮನಸೆಳೆವ ಮಾದರಿಗಳು

ಇಂದಿನ ಅಂದದ ರಂಗುಗಳು.

ಸರ್ಕಾರಿ ರೇಷ್ಮೆ ನೇಯುವ ಕಾರ್ಖಾನೆ,

ಮೈಸೂರು

## Releasing two favourite Films in September

# AT B.R.V. TALKIES
### BANGALORE

Krishna Movieton's

# PREET





With SWARNALATHA
NAZIR
SNEHA PRABHA
PAHARI SANYAL
— AND —
CHANDRAMOHAN



Bombay Cineton's

# Lal-Haveli



— With —
NURZEHAN
MAYA BANNERJI
SURENDRA AND
YAKUB

*Controlled by*

**Bansum Pictures,**

185, Gandhi Nagar :: Bangalore City

# ಪ್ರತ್ಯೇಕ ಕೈಗಾರಿಕೆ ಉಪಯೋಗಗಳಿಗೆ

















ಕ್ಯಾಸ್ಟ್ರಾಲ್ ಎಣ್ಣೆ ಅಳತೆ ಪಾತ್ರೆಗಳ ರಕ್ಷಣೆಗೆ.... ರಬ್ಬರು ಬೂಟ್ಸುಗಳಿಗೆ ಒಳ್ಳೇ ಹೊಳಹೊಳಪಿಗೆ ... ಲೋಹದ ಟ್ಯೂಬುಗಳಿಗೆ ಫ್ಲೆಯ್ಯಾಬಲ್ ಪೆಯಿಂಟುಗಳು .... ಕೈಗಾರಿಕೆ ಕೆಲಸಗಳ ನಾನಾ ಉಪಯೋಗಗಳಿಗೆ ಕ್ರಿಂಕಲ್ (Crinkle) ಫಿನಿಷ್ ಬಣ್ಣಗಳು ...., ಇಂಡಿಯಾ ಟೈರಿನ ಮೇಲೆ ಕೆಂಪುಬಣ್ಣದ ಗುಂಡು ಪಟ್ಟಿಗಳಿಗೆ ... ಲೋಹದ ಕುರ್ಚೀ ಮೊದಲಾದವುಗಳಿಗೆ ಚಿರಕಾಲ ಬಾಳುವ ಗಟ್ಟಿ ಬಣ್ಣಗಳು .... ರೋಡು ರೋಲರುಗಳಿಗೆ ಬಿಸಿಯನ್ನು ತಾಳುವ ಬಣ್ಣಗಳು— ಇವು ಷಾಲಿಮಾರ್ ಬಣ್ಣದ ತಯಾರಿಕೆಗಳ ನಾನಾ ಕೈಗಾರಿಕೆ ಉಪಯೋಗಗಳಲ್ಲಿ ಕೆಲವು ಮಾತ್ರ. ನಿಮ್ಮ ಪ್ರತ್ಯೇಕ ಕೆಲಸಗಳ ಬಗ್ಗೆ ನಮ್ಮ ಸಲಹೆಯು ಬೇಕೇನು?

# ಷಾಲಿಮಾರ್

SPF 37 KN

**SHALIMAR PAINT, COLOUR & VARNISH CO., LTD.,**

**Post Box 136, Madras 1**

Printed by B. S Iyengar, Bangalore City

Publisher—B. N. Gupta Editor—M. Shivaram